ಶ್ರೀ

ಸ್ವಾಮಿ ಸಿದ್ಧೇಶ್ವರಾನಂದರಿಗೆ

ಎಲ್ಲಿ ಪೂಜೆ ನಡೆಯುತಿಹುದೊ
ಅಲ್ಲೆ ನನ್ನ ದೇಗುಲ;
ಪ್ರಾರ್ಥಿಸಿರುವುದಾರ ಹೃದಯ
ಅದುವೆ ನನ್ನ ಗುರುಕುಲ;
ದೇವರೇಗಳಾರ್ಗೆ ನೆನಪೊ
ನಾನವರ ಕುಲ!

# ವಿವರ

## ಶ್ರೀ ರಾಮಕೃಷ್ಣ ಪರಮಹಂಸದೇವನಿಗೆ

ಸಕಲ ಸಾಕ್ಷಾತ್ಕಾರದ ಮಾನಸಸರೋವರದಿಂದ ಹರಿದು ಬರುವ ಬಹು ಪೂಜೆಯ ವಿವಿಧವಾಹಿನಿಗಳು ನಿನ್ನ ಧ್ಯಾನ ಸಮುದ್ರದಲ್ಲಿ ಸಂಲಗ್ನವಾಗಿವೆ.

ನಿನ್ನ ಜೀವನದ ಸಮನ್ವಯ ದೇವಮಂದಿರದಲ್ಲಿ ಅನಂತಾನಂದವು ಅಸಂಖ್ಯವಾಗಿ ರೂಪುಗೊಂಡಿದೆ.

ಇದೋ ದೂರದಿಂದಲೂ ಹತ್ತಿರದಿಂದಲೂ ಆ ಗುಡಿಗೆ ಯಾತ್ರೆ ಬರುತ್ತಿರುವ ನಮಸ್ಕಾರಗಳೊಡನೆ ನನ್ನ ನಮಸ್ಕಾರವನ್ನೂ ನಿವೇದಿಸುತ್ತೇನೆ.

—ರವೀಂದ್ರನಾಥ ಠಾಕೂರ

# ಅಗ್ನಿಹಂಸ



## ಮನ್ಮನೋಮಂದಿರಕೆ

ಮನ್ಮನೋಮಂದಿರಕೆ, ಓ,
ಲೋಕಗುರುಗಳೆಲ್ಲ ಬನ್ನಿ !
  ಬನ್ನಿ, ಬನ್ನಿ, ಬನ್ನಿ !—
  ತುಳಿಯೆ ನಿಮ್ಮ ಪದತಲ
ದಲ ದಲ ದಲ ಅರಳ್ವುದೆನ್ನ
  ಶಿರಃಕಮಲ ಕುಟ್ಮಲ !
ತಮೋತಿಮಿರವಳಿಯಲಲ್ಲಿ
  ಪರಂಜ್ಯೋತಿ ಬೆಳಗಲಿ ;
ಋತದ ಶಿವದ ಆನಂದದ
  ಚಿದ್ವಿಭೂತಿ ತೊಳಗಲಿ.

ಮನ್ಮನೋಮಂದಿರಕೆ, ಓ,
ಲೋಕಗುರುಗಳೆಲ್ಲ ಬನ್ನಿ !
  ಬನ್ನಿ, ಬನ್ನಿ, ಬನ್ನಿ !

# ಶ್ರೀ ಗುರು

ಭರತಖಂಡದ ನೀಲಗಗನವ ತಿಮಿರ ಮುಸುಗಿರಲು,
ಭಾರತೀಯರು ತಮ್ಮ ಧ್ಯೇಯವ ಮರೆತು ಮಲಗಿರಲು,
ಪರಮಹಂಸನೆ, ಉದಯಸೂರ್ಯನ ತೆರದಿ ರಂಜಿಸಿದೆ;
ಹೃದಯ ನಭದಜ್ಞಾನ ತಿಮಿರವನಿರದೆ ಭಂಜಿಸಿದೆ.

ಸರ್ವಮಾರ್ಗಗಳೊಂದೆ ನಿಲಯಕೆ ಪೋಪುವೆಂಬುದನು
ಯೋಗವಿದ್ಯೆಯೊಳರಿತು ಮಾನವಕುಲಕೆ ಬೋಧಿಸಿದೆ;
ಕ್ರೈಸ್ತ ಹಿಂದೂ ಮಹಮದೀಯರೆ ಬೌದ್ಧ ಮೊದಲಾದ
ಮತಗಳಾತ್ಮವದೊಂದೆ ಎಂಬುದ ತಿಳುಹಿ ಪಾಲಿಸಿದೆ.

ಮಾಯತಿಮಿರದಿ ಮಾರ್ಗ ಕಾಣದೆ ಗೋಳಿಡುತಲಿಹರ
ಅಭಯದೀಪವ ಹಿಡಿದು ದಾರಿಯ ತೋರಿ ರಕ್ಷಿಸಿದೆ;
ಘೋರ ಸಂಸಾರಾಂಬುನಿಧಿಯೊಳು ಮುಳುಗಿ ತೇಲುವರ
ಅಮೃತನಾವೆಯ ತಂದು ವೇಲೆಯನಿರದೆ ಸೇರಿಸಿದೆ.

ಶಿರವ ನಾಕದೊಳಿರಿಸಿ ಚರಣಗಳೆರಡ ಭೂತಳದಿ
ಗುರು ಹಿಮಾಚಲದಂತೆ ನಿಂತಿಹೆ, ಶಾಂತಿಯಾಶ್ರಯನೆ.
ಹೃದಯ ನಿನ್ನದು ಮೇರೆಯಿಲ್ಲದ ರುಂದ್ರವಾರಿನಿಧಿ :
ಚಲಿತ ಮತಗಳ ಚಂದ್ರನಾವೆಗಳಲ್ಲಿ ತೇಲುತಿವೆ !

ಕ್ರಿಸ್ತ ಮಹುಮದ ರಾಮ ಕೃಷ್ಣ ಜೊರಾಸ್ತ ಗೌತಮರು
ದಿವ್ಯ ವೇದ ಕೊರಾನು ಬೈಬಲು ತಲ್ಮುಡಾದಿಗಳು
ಗುಡಿಯು ಚರ್ಚು ಮಸೀದಿ ಆಶ್ರಮ ಅಗ್ನಿಪೂಜೆಗಳು
ಕಾಶಿ ಮಕ್ಕಗಳೆಲ್ಲ ನಿನ್ನೊಳಗೈಕ್ಯವಾ 'ಗಿಹವು'!

ದಕ್ಷಿಣೇಶ್ವರ ದೇವನಿಲಯದ ಪರಮಯೋಗೀಂದ್ರ,
ಶ್ರೀ ವಿವೇಕಾನಂದ ಪೂಜಿತನಾತ್ಮ ಭಾವಿತನೆ,
ಲೋಕಜೀವರಿಗಾತ್ಮಶಕ್ತಿಯ ನೀಡಿ ಕಾಪಾಡು;
ನೆನೆವರೆಲ್ಲರ ಹೃದಯವಾಗಲಿ ನಿನ್ನ ನೆಲೆವೀಡು !

# ನಿನ್ನಡಿದಾವರೆಯಲಿ

ನಿನ್ನಡಿದಾವರೆಯಲಿ ಹೂಕುಡಿಯುವ
ಮರಿದುಂಬಿಯು ನಾನು ;
ಹೇ ಗುರುದೇವನೆ, ನೀನೆನ್ನಾತ್ಮಕೆ
ಮಧುಮಾಸದ ಜೇನು !
ವಿವಿಧ ಪಯೋಜದಿ ವ್ಯರ್ಥಾಯಾಸದಿ
ತೊಳಲಿದೆ ತೃಪ್ತಿಯ ಚಿರನಿಧಿಗೆ ;
ಬಾಯಾರಿಕೆಯಿಂದೆದೆ ಕುದಿಗೊಂಡಿರೆ
ಮೈದೋರಿದೆಯೈ ನೀ ತುದಿಗೆ !



# ಆಹ್ವಾನ

ಬಾ, ಶ್ರೀಗುರುದೇವನೆ ಬಾ,
ಶ್ಯಾಮಲ ಕಾನನ ಶೃಂಗತರಂಗಿತ
ಸಹ್ಯಾದ್ರಿಯ ಸುಂದರ ಮಂದಿರಕೆ,
ಚಿನ್ಮಯ ಮಮ ಹೃನ್ಮಂದಿರಕೆ,
ಬಾ, ಶ್ರೀಗುರುದೇವನೆ ಬಾ!

ವಂಗಮಾತೆಯಲಿ ಜನ್ಮವನೆತ್ತಿ
ದಿವ್ಯಸಮನ್ವಯ ಧರ್ಮವ ಬಿತ್ತಿ,
ಮತಭೇದದ ವಿಷವನು ಹೋಗಾಡಿ
ಲೋಕದ ದೃಷ್ಟಿಗೆ ಸಮತೆಯ ನೀಡಿ
ಕಾಪಾಡಿದ ಪಾವನ ಮೂರುತಿಯೆ
ಬಾ, ಶ್ರೀ ಗುರುದೇವನೆ ಬಾ!

ಮಿಂದಿದೆ ನವವರ್ಷದಿ ಮಲೆನಾಡು,
ಹೊಸ ಸಿಂಗಾರದಿ ಮೆರೆದಿದೆ ಕಾಡು.
ಕೋಗಿಲೆ ಕಾಜಾಣವು ಕಾಮಳ್ಳಿ
ಆಹ್ವಾನಿಸುತಿವೆ ಗಾನದೊಳಿಲ್ಲಿ,
ಹೇ ನವಯುಗದವತಾರ,
ಬಾ, ಶ್ರೀಗುರುದೇವನೆ ಬಾ!

ಪೂರ್ವದಿಗಂತದಿ ಕಾಂತಿಯು ಮೂಡಿ
ನಾಡಿನ ಕತ್ತಲೆಯನು ಹೋಗಾಡಿ
ಮೈದೋರುವ ತೆರದಲಿ ನೀನಿಂದು
ನಮ್ಮಾ ವನಗೃಹಕ್ಕೈತಂದು
ನಮ್ಮೆದೆಗತ್ತಲ ಪರಿಹರಿಸಿ
ಸುಖ ಶಾಂತಿಯ ಕಾಂತಿಯ ಬರಿಸಿ
ಕೃಪೆಗೈ ಓ ಮಮ ದೀನಬಂಧು!

# ಭಕ್ತನ ಭರವಸೆ

ನನ್ನೆದೆಯ ಬಾನಿನಲಿ
ಧ್ರುವತಾರೆ ನೀನಿರಲು
ದಾರಿ ತಪ್ಪಿದರೇನು ?
ದಿಕ್ಕು ತಪ್ಪೆನೊ ನಾನು,
ಜೀವಯಾತ್ರೆಯಲಿ !

ಗುರಿಯು ತಪ್ಪುವುದಿಲ್ಲ ;
ಕಡೆಗೆ ಬರುಗೈಯಲ್ಲ !
ದೊರೆಕೊಳ್ಳುವುದು ಎಲ್ಲ,
ತುಂಬಿರಲು ನಂಬುಗೆಯು
ಹೃದಯಪಾತ್ರೆಯಲಿ !



# ಶರಣು

ಇದುವರೆಗೆ ನೀನೆನ್ನ ಕೈಹಿಡಿದು ನಡೆಸಿರುವೆ,
ಇನ್ನಾದರೂ ನನ್ನ ಕೈಬಿಡದಿರು.
ಅಂದಿನಂತೆಯೆ ಇಂದು ನಾನೊಂದು ಶಿಶು ಎಂದು
ಎಂದಿಗೂ ಕೈಬಿಡದೆ ಸಲಹೈ, ಗುರೂ!

ವೈರಾಗ್ಯವೊಂದುಕಡೆ ತನ್ನ ಮಹಿಮೆಯ ತೋರಿ
ಕೈಚಾಚಿ ಕರೆಯುತ್ತಿದೆ;
ಸೌಂದರ್ಯವೊಂದುಕಡೆ ತನ್ನ ಮೋಹವ ಬೀರಿ
ಮೈಚಾಚಿ ಸೆಳೆಯುತ್ತಿದೆ.

ಒಂದುಕಡೆ ಸ್ವಾತಂತ್ರ್ಯ, ಒಂದುಕಡೆ ಮಾಧುರ್ಯ,
ನಡುವಿಹೆನು ಬಟ್ಟೆಗೆಟ್ಟು.
ಮುಕ್ತಿಯನ್ನೊಪ್ಪಲೋ? ಮಾಯೆಯನ್ನಪ್ಪಲೋ?
ತಿಳಿದ ನೀನೆನ್ನ ನಟ್ಟು!

ಇದುವರೆಗೆ ನೀನೆನ್ನ ಕೈಹಿಡಿದು ನಡೆಸಿರುವೆ,
ಇನ್ನಾದರೂ ನನ್ನ ಕೈಬಿಡದಿರು.
ಅಂದಿನಂತೆಯೆ ಇಂದು ನಾನೊಂದು ಶಿಶು ಎಂದು
ಎಂದಿಗೂ ಕೈಬಿಡದೆ ಸಲಹೈ, ಗುರೂ!

# ಅಂತರ್ವಾಣಿ

ಒಂದಲ್ಲ ಒಂದುದಿನ ನೀನೆಲ್ಲ ತೊರೆವೆ ;
ಒಂದೆದೆಯೊಳೊಮ್ಮನದೊಳೆನ್ನೆದೆಗೆ ಬರುವೆ !

ನೂರು ಆವೇಶಗಳು, ನೂರಾರು ವೇಷಗಳು,
ರೋಷಸಂತೋಷಗಳು ಎಲ್ಲ ಕೊನೆಮುಟ್ಟಿ,
ಜೀವನೋದ್ಯಾನದಲಿ ಕುಸುಮ ವೃಂದದ ಕಾಂತಿ
ಮಸುಳಾಗಿ ಮೃತ್ಯು ಬರೆ ಬಾಗಿಲನು ತಟ್ಟಿ ;

ಇಂದು ನಿನ್ನಯ ಕಣ್ಣ ಸೆಳೆವ ಕಣ್ಣುಗಳೆಲ್ಲ,
ಇಂದು ಕೆಂದುಟಿಗಳನು ಕರೆವ ಕೆನ್ನೆಗಳು,
ಇಂದಿನ ಯಶೋಲೋಭ, ಇಂದಿಸ ಮಹತ್ಕಾಂಕ್ಷೆ,
ಅಂದೆಲ್ಲ ನಿನಗಹವು ಬರಿಯ ಸೊನ್ನೆಗಳು.

ಅಂದು ನನ್ನೊಬ್ಬನನೆ ನೆನೆವ ನಿನ್ನೆದೆಯಲ್ಲಿ
ಬೆಳಕುಹೊಳೆ ಹರಿಯುವುದು ಕತ್ತಲೆಯ ಕೊಚ್ಚಿ ;
ಜಗವೆಲ್ಲ ಜಾರುವುದು ; ಒಲ್ಮೆ ಮೈದೋರುವುದು ;
ಬಾಳ್ಬೊನಲು ಹರಿವುದೆನ್ನನೆ ನಚ್ಚಿ ನೆಚ್ಚಿ !



# ಕೃಪೆ

ನನಗೆ ಅವಸರವಿಲ್ಲ, ಮತ್ತೆ ಬೇಸರವಿಲ್ಲ ;
ಬೇಗ ಬರಲಿಲ್ಲೆಂದು ನೋವಿದ್ದರೂ
ಕೋಪವೂ ಇಲ್ಲ, ಔದಾಸೀನ್ಯವೂ ಇಲ್ಲ ;
ಕಾಯುವೆನು ನೀನೆದೆಗೆ ಬರುವನ್ನೆಗಂ !

ಕೊನೆಯಿಲ್ಲದೆನ್ನಯ ನಿರೀಕ್ಷಣೆಯ ನಯನದಲಿ
ಹನಿ ತುಂಬಿ ಕಂಪಿಸುತ್ತಿಹುದಾದರೂ
ಬಗೆಯಲ್ಲಿ ಹೊಗೆಯಿಲ್ಲ ; ಹಗೆತನದ ಸೋಂಕಿಲ್ಲ ;
ಕಾಯುವೆನು ನೀನೆದೆಗೆ ಬರುವನ್ನೆಗಂ !

ದೇಶವಿನಿತನು ಬಿಡದೆ ಕಾಲವೆಲ್ಲವನಲೆದು,
ಮಾಡುವಾಟವನೆಲ್ಲ ಮಾಡಿಯಾಡಿ,
ಮೈ ಸೊರಗಿ ಬೇಸತ್ತು, ಸಾಕಾಗಿ ಸೋತು, ನೀ
ಕಾತರದಿ ಹಾತೊರೆದು ಬರುವನ್ನೆಗಂ,
ಕಾಯುವೆನು ನನ್ನೆದೆಗೆ ಬರುವನ್ನೆಗಂ !



# ಮಹಾಮಾತೆ

ಶ್ರೀ ಶಾರದಾದೇವಿ, ಹೇ ಮಹಾಮಾತೆ,
ಶ್ರೀ ರಾಮಕೃಷ್ಣ ಗುರುದೇವ ಸಂಪ್ರೀತೆ,
ಪರಮಪಾವನಹೃದಯೆ, ಕಲಿಯುಗದ ಸೀತೆ,
ಭಕ್ತಿಯಿಂದಾರಾಧಿಪೆವು ನಿನ್ನನಮ್ಮ !

ಗಗನದಂತಿಹುದಮ್ಮ ನಿನ್ನ ಗಾಂಭೀರ್ಯ,
ನಿನ್ನ ತೇಜದ ಭಾಗವೀ ನಮ್ಮ ಸೂರ್ಯ,
ನೀ ಕಾಳಿ, ನೀ ಲಕ್ಷ್ಮಿ, ನೀ ಬಿಜ್ಜೆಯಮ್ಮ ;
ಮಕ್ಕಳಾಗಿಹ ನಮ್ಮ ಪೊರೆ, ಶಕ್ತಿಯಮ್ಮ !

ಮಹಿಮೆ ಮಹಿಮೆಯನರಿವುದೆಂದೆಂಬರಮ್ಮಾ,
ಗುರುವರ್ಯನಂ ತಿಳಿದ ನೀಂ ಮಹಿಮಳಮ್ಮ !
ಪತಿಭಕ್ತಿಯದೆ ಮುಕ್ತಿ ನಿನಗಾಯಿತಮ್ಮ,
ಪರಶಕ್ತಿ ನೀನಮ್ಮ, ನಮ್ಮ ಸಲಹಮ್ಮ !

ನಿನ್ನ ನಾಮವೆ, ಜನನಿ, ಸುರನದಿಯ ತೀರ್ಥ ;
ಎಲೆ ತಾಯೆ, ನೀನೇ ಪವಿತ್ರತಮ ತೀರ್ಥ !
ನಿನ್ನ ಪೂಜೆಯೆ ಭಕ್ತಿ, ಸಾಧನೆ, ವಿರಕ್ತಿ ;
ನಿನ್ನ ನೆನೆವುದೆ ನಮಗೆ ಗುರು ತಪಶ್ಶಕ್ತಿ !



## ಒಂದು ಪ್ರಾರ್ಥನೆ

ತನ್ನ ಹಸುಳೆಯ ಹೂವುಹಣೆಯಲಿ
ಮಸಿಯ ಚುಕ್ಕಿಯು ಕಾಣಲು
ಹೆತ್ತ ತಾಯಿಯು ಹಾಲುಗೆನ್ನೆಗೆ
ಮುತ್ತನೀಯದೆ ಮಾಣಳು.

ಅಂತೆ ನಮ್ಮೊಳು ದೋಷವಿದ್ದರು
ಕ್ಷಮಿಸಿ ಕರುಣಿಸಿ ಎತ್ತಿಕೋ
ಅಮ್ಮ, ಪಾವನೆ ನೀನು ; ಹೇಸದೆ
ನಮ್ಮ ಗಳನೆದೆಗೊತ್ತಿಕೋ !



# ಕರ್ಮಯೋಗಿ

ಸೂತ್ರಧಾರಿಣಿ ನೀನು; ಪಾತ್ರಚಾರಿಯು ನಾನು;
ಯಾವ ಪಾತ್ರವನಿತ್ತರೇನು ನೀನೆನಗೆ?
ನಿನ್ನ ಅಧ್ಯಕ್ಷತೆಯ ನಿನ್ನ ಈ ಲೀಲೆಯುಲಿ
ಪರಮಪುರುಷಾರ್ಥರೂಪಿಣಿ ನೀನೆ ಕೊನೆಗೆ!

ಚವರಿವಿಡಿದರೆ ಮೇಲೆ, ಪೊರಕೆವಿಡಿದರೆ ಕೀಳೆ,
ಮಾಳ್ಪ ಕೆಲಸಗಳೆಲ್ಲ ನೈವೇದ್ಯವಾಗೆ?
ರಸಭೇದವಿಹುದೆ ಸುಖದುಃಖಗಳಿಗಾಟದಲಿ
ಜೀವಭಾವವೆ ಸಚ್ಚಿದಾನಂದವಾಗೆ?

ಸಚ್ಚಿದಾನಂದರೂಪಿಣಿ ನೀಂ, ಜಗದ್ಧಾತ್ರಿ,
ಮೆಚ್ಚುವಂದದಿ ನಾಂ ನಡೆಯೆ ಪಾತ್ರಚಾರಿ
ಹೆಚ್ಚು ಕಡಮೆಯು ಹೆಮ್ಮೆ ದೈನ್ಯದ ವಿಭೇದವದು
ಹುಚ್ಚು ಬೆಮೆಯಲ್ತೆ, ಓ ಋತಸೂತ್ರಧಾರಿ!



# ಅನಿಶ್ಚಯ—ಸುನಿಶ್ಚಯ

ಎಲ್ಲ ಅನಿಶ್ಚಯ ! ಒಂದೆ ಸುನಿಶ್ಚಯ :
  ನಿನ್ನ ಅಚಿಂತ್ಯ ಅಪಾರ ದಯಾ !
ದುಃಖಹಿರಣ್ಯನ ಸುಖನಖಕೃಪೆಯಿಂ
  ಸೀಳ್ವ ನೃಸಿಂಹನ ಮುಖದ ದಯಾ !

ಎಲ್ಲ ಸುಚಂಚಲ ! ಒಂದೆ ಅಚಂಚಲ :
  ನಿನ್ನ ಚರಣತಲ ಭಕ್ತಿಬಲ !
ಎಲ್ಲ ಬಲಗಳಿಗೆ ತಾ ಮೂಲದ ಬಲ,
  ಸಕಲ ತಪೋತರು ಪರಮಫಲ !



# ಗುರುದೇವನಿಗೆ

ಧ್ಯಾನ ನದಿಯಲಿ ಕಲ್ಪನೆಯ ನಾವೆಯಲಿ ತೇಲಿ
ದಕ್ಷಿಣೇಶ್ವರಕೈದಿ ಸಾ ಬಾಳುತಿರೆ ಮರಳಿ
ಕಳೆದ ಕಾಲದಲಿ, ಚಿಮ್ಮುವುದು ನನ್ನೆದೆಯರಳಿ
ಪೂತ ಸಾನ್ನಿಧ್ಯದಲಿ ರೋಮಾಂಚವನು ತಾಳಿ !
ಗಗನ ವಿಸ್ತೀರ್ಣತೆಯ ನೀಲ ಮೌನ ಸಮಾಧಿ,
ಪಂಚವಟಿ ವಿಟಪಿವೃಂದದ ವಿಹಂಗಮಗಾನ,
ಮಂದ ಮಂದಾಕಿನಿಯ ಗಂಭೀರ ಕಲತಾನ,
ಜಗದಂಬೆಯಾಲಯದಿ ಪರಮಹಂಸನ ಬೋಧಿ !
ನೀನೆನ್ನ ಜೀವನ ಚಿರಂತನಧ್ರುವತಾರೆ,
ಸರ್ವ ರುಚಿ ಭಾವ ಸಂಸ್ಕಾರಗಳ ಸ್ಪರ್ಶಮಣಿ,
ಆಶೆ ಆಕಾಂಕ್ಷೆ ಆದರ್ಶಗಳ ರತ್ನಖನಿ,
ಹೇ ಸಮನ್ವಯಮೂರ್ತಿ ! ನೀನಿಳೆಗೆ ಮೈದೋರೆ
ಮುಕ್ತಿಯರಳಿತು ಧರ್ಮ ಸೇವಾ ತಪಸ್ಸಿನಲಿ
ಮನುಜ ಗೌರವ ಗಿರಿಯ ಮಾನಸ ಸರಸ್ಸಿನಲಿ !



# ಚಿರವಾಗಲಿ

ಚಿರವಾಗಲಿ ಚಿರವಾಗಲಿ ಚಿರವಾಗಲಿ
ನಿನ್ನ ನೆನಹು ನನ್ನ ಮನದಿ, ಹೇ ಗುರೂ!
ಶಿಶಿರ ಋತುವು ಗತಿಸುತಿರಲು
ವಿಪಿನದಂತರಂಗದಲ್ಲಿ
ಹೊಸ ವಸಂತನುಸಿರು ಹಸರಿ
ನಲಿಯುವಂತೆ ಕಾನನ
ನವೀನ ಜೀವನ—

ಚಿರವಾಗಲಿ ಚಿರವಾಗಲಿ ಚಿರವಾಗಲಿ
ನಿನ್ನ ನೆನಹು ನನ್ನ ಮನದಿ, ಹೇ ಗುರೂ!
ಚೆಲುವೆಯೊಮ್ಮೆ ಸುಳಿದು ಕಣ್ಗೆ
ಒಲುಮೆಕಿಡಿಯ ಸೂಸಲೆದೆಗೆ
ಕಿಚ್ಚು ಬಾಳನೆಲ್ಲ ಮುಚ್ಚಿ
ಹುಚ್ಚುಗೈವ ತೆರದಲಿ
ಪ್ರೇಮ ಭರದಲಿ!



# ಸ್ವಾಮಿ ವಿವೇಕಾನಂದ

ಶ್ರೀ ವಿವೇಕಾನಂದ ಗುರುವರ, ನವಯುಗಾಚಾರ್ಯ,
ರಾಮಕೃಷ್ಣರ ಭೀಮಶಿಷ್ಯನೆ, ವೀರವೇದಾಂತಿ,
ಭಾರತಾಂಬೆಯ ಧೀರಪುತ್ರನೆ, ಸಾಧುಭೈರವನೆ,
ಸ್ಥೈರ್ಯದಚಲವೆ, ಧೈರ್ಯದಂಬುಧಿ, ಜಯತು ! ಜಯಜಯತು !

ಚಿದ್ ಖುತಾಗ್ನಿಯ ಚಂಡಕಾಂತಿಯೆ, ಮೇರುಸಂನ್ಯಾಸಿ,
ಭರತಖಂಡದ ನಂದಿದಿದ್ದಲಿಗಿತ್ತೆ ತೇಜವನು ;
ಬೊಮ್ಮದಂಬುಧಿಗಲೆಯನೀಯುವ ಭರದ ಬಿರುಗಾಳಿ,
ಬೂದಿಮುಚ್ಚಿದ ಭರತಭೂಮಿಯನೂದಿ ಬೆಳಗಿಸಿದೆ !

ಭರತಖಂಡದೊಳರಚುತಲೆಯುವ ಮನುಜಕುರಿಗಳಿಗೆ
ಸಿಂಹಹೃದಯವನಿತ್ತು ಗರ್ಜಿಸುವಂತೆ ನೀ ಮಾಡಿ
ಕುರಿಯದೊಡ್ಡಿಯ ಮುರಿದು ಸಿಂಹದ ಗುಹೆಯ ವಿರಚಿಸಿದೆ,
ಸಿಂಹಹೃದಯನೆ, ಶ್ರೀ ವಿವೇಕಾನಂದಯೋಗೀಂದ್ರ !

ನಿಶೆಯ ಗಗನದೊಳುರಿವ ತಾರೆಯ ತೆರದಿ ರಂಜಿಸಿದೆ ;
ಜಗದ ಕಂಗಳು ನೋಡಲಾರದೆ ನಿನ್ನ ತೇಜವನು
ವಿಸ್ಮಯಾಶ್ಚರ್ಯದಲಿ ನಿಂತುವು ಮೂಗುವೆರಗಾಗಿ !
ನಿನ್ನ ಮಹಿಮೆಯ ಸವಿವ ಸೆರೆಯೇ ಮುಕ್ತಿ, ವರಯೋಗಿ !

ಮೊರೆದು ಗರ್ಜಿಪ ಕಡಲವಾಣಿಯು ನಿನ್ನ ವರವಾಣಿ,
ಕಾರ ಮಿಂಚನು ನಗುವ ತೇಜವು ನಿನ್ನ ಮೈಕಾಂತಿ,
ಆಳವಂಬುಧಿಯಾಳ, ಮೇರೆಯೆ ನಭದ ವಿಸ್ತಾರ ;
ಮಂದರಾದ್ರಿಯ ಮೀರಿದಚಲನು ನೀನು, ಯೋಗೀಂದ್ರ !

ಬ್ರಹ್ಮವಿದ್ಯೆಯ ದಿವ್ಯದೀಪ್ತಿಯ ದೇಶದೇಶದಲಿ
ಹರಡಿ, ಅಭಯವನೀಯುತಮೃತವ ಸುರಿದು ಪಾಲಿಸಿದೆ ;
ಗಗನಕೆತ್ತಿದೆ ಭಾರತಾಂಬೆಯ ಕೀರ್ತಿಕೇತನವ ;
ಓಜೆ ತುಂಬಿಹುದಾರ್ಯಮಾತೆಯ ಶ್ರೀನಿಕೇತನವ !

ನಿನ್ನ ಹೆಸರದೆ ಶಕ್ತಿಯೀಯುವ ದಿವ್ಯತರಮಂತ್ರ ;
ನಿನ್ನ ಮಾರ್ಗವೆ ಮುಕ್ತಿದಾಯಕವಾದ ವರಮಾರ್ಗ ;
ನಮ್ಮ ಹೃದಯಕೆ ಹೃದಯ ನೀನಯ್, ಶಕ್ತಿಸಾಗರನೆ,
ಯಮನ ನುಂಗಿದ ರಾಜಯೋಗಿಯೆ, ರುಂದ್ರಸಂನ್ಯಾಸಿ !

ನಿನ್ನ ಧೈರ್ಯ ಸ್ಥೈರ್ಯ ದೃಢತೆಯು, ನಿನ್ನ ಪವಿಶಕ್ತಿ
ಭಾರತೀಯರಿಗಿಂದು ಬೇಕಾಗಿಹುದು, ದಿವ್ಯಾತ್ಮ !
ರುದ್ರನರ್ತನವೆಸಗು ಹೃದಯದಿ, ಬುದ್ಧಿಭೈರವನೆ ;
ರುದ್ರಭೂಮಿಗಳಾಗಲೆಮ್ಮಾ ಕ್ಷುದ್ರ ಹೃದಯಗಳು !

ಶ್ರೀ ವಿವೇಕಾನಂದ ಗುರುವರ, ನವಯುಗಾಚಾರ್ಯ,
ರಾಮಕೃಷ್ಣರ ಭೀಮಶಿಷ್ಯನೆ, ವೀರವೇದಾಂತಿ,
ಭಾರತಾಂಬೆಯ ಧೀರಪುತ್ರನೆ, ಸಾಧುಭೈರವನೆ,
ಸ್ಥೈರ್ಯದಚಲವೆ, ಧೈರ್ಯದಂಬುಧಿ, ಜಯತು ! ಜಯಜಯತು !



# ಸಂನ್ಯಾಸಿ ಗೀತೆ*

ಏಳು, ಮೇಲೇಳೇಳು ಸಾಧುವೆ, ಹಾಡು ಚಾಗಿಯ ಹಾಡನು ;
ಹಾಡಿನಿಂದೆಚ್ಚರಿಸು ಮಲಗಿಹ ನಮ್ಮ ಈ ತಾಯ್ನಾಡನು !
ದೂರದಡವಿಯೊಳೆಲ್ಲಿ ಲೌಕಿಕವಿಷಯವಾಸನೆ ಮುಟ್ಟದೊ,
ಎಲ್ಲಿ ಗಿರಿಗುಹೆಕಂದರದ ಬಳಿ ಜಗದ ಗಲಿಬಿಲಿ ತಟ್ಟದೊ,
ಎಲ್ಲಿ ಕಾಮವು ಸುಳಿಯದೊ,—ಮೇಣ್
ಎಲ್ಲಿ ಜೀವವು ತಿಳಿಯದೊ
ಕೀರ್ತಿ ಕಾಂಚನವೆಂಬುವಾಸೆಗಳಿಂದ ಜನಿಸುವ ಭ್ರಾಂತಿಯು,
ಎಲ್ಲಿ ಆತ್ಮವು ಪಡೆದು ನಲಿವುದೊ ನಿಚ್ಚವಾಗಿಹ ಶಾಂತಿಯು,
ನನ್ನಿಯರಿವಾನಂದವಾಹಿನಿಯೆಲ್ಲಿ ಸಂತತ ಹರಿವುದೊ,
ಎಲ್ಲಿ ಎಡೆಬಿಡದಿರದ ತೃಪ್ತಿಯ ಸರಿ ನಿರಂತರ ಸುರಿವುದೊ
ಅಲ್ಲಿ ಮೂಡಿದ ಹಾಡನುಲಿಯೈ, ವೀರ ಸಂನ್ಯಾಸಿ—
ಓಂ ! ತತ್ ! ಸತ್ ! ಓಂ !

೨

ಕುಟ್ಟಿ ಪುಡಿಪುಡಿಮಾಡು ಮಾಯೆಯು ಕಟ್ಟಿಬಿಗಿದಿಹ ಹಗ್ಗವ ;
ಕಿತ್ತುಬಿಸುಡೈ ಹೊಳೆವ ಹೊನ್ನಿನ ಹೆಣ್ಣುಮಣ್ಣಿನ ಕಗ್ಗವ !
ಮುದ್ದಿಸಲಿ ಪೀಡಿಸಲಿ ದಾಸನು ದಾಸನೆಂಬುದೆ ಸತ್ಯವು ;
ಕಬ್ಬಿಣವೊ ? ಕಾಂಚನವೊ ? ಕಟ್ಟಿದ ಕಣ್ಣಿ ಕಣ್ಣಿಯೆ ನಿತ್ಯವು.
ಪಾಪ ಪುಣ್ಯಗಳೆಂಬವು,—ಮಾ
ತ್ಸರ್ಯ ಪ್ರೇಮಗಳೆಂಬವು
ದ್ವಂದ್ವರಾಜ್ಯದ ಧೂರ್ತಚೋರರು ; ಬಿಟ್ಟುಕಳೆ, ಕಳೆಯುವರನು !
ಮೋಹಗೊಳಿಪರು, ಬಿಗಿವರಿರಿವರು ; ಎಚ್ಚರಿಕೆಯಿಂದವರನು
ತಳ್ಳು ದೂರಕೆ, ಓ ವಿರಕ್ತನೆ ! ಹಾಡು ಚಾಗಿಯ ಹಾಡನು !
ಹಾಡಿನಿಂದೆಚ್ಚರಿಸು ಮಲಗಿಹ ನಮ್ಮ ಈ ತಾಯ್ನಾಡನು !
ಹಾಡು ಮುಕ್ತಿಯ ಗಾನವನು, ಓ ವೀರ ಸಂನ್ಯಾಸಿ—
ಓಂ ! ತತ್ ! ಸತ್ ! ಓಂ !

---

* ಸ್ವಾಮಿ ವಿವೇಕಾನಂದರಿಂದ ಭಾಷಾಂತರಿಸಿದ್ದು.

೩

ಕತ್ತಲಳಿಯಲಿ ; ಮಬ್ಬು ಕವಿಸುವ ಭವದ ತೃಷ್ಣೆಯು ಬತ್ತಲಿ ;
ಬಾಳಮೋಹವು ಮರುಮರೀಚಿಕೆ ; ಮಾಯೆ ಕೆತ್ತಿದ ಪುತ್ತಳಿ !
ಜನನದೆಡೆಯಿಂ ಮರಣದೆಡೆಗಾಗೆಳೆವುದೆಮ್ಮನು ದೇಹವು ;
ಜನ್ಮಜನ್ಮದಿ ಮರಳಿ ಮರಳುವುದೆಮ್ಮ ಬಿಗಿಯಲು ಮೋಹವು !
ತನ್ನ ಜಯಿಸಿದ ಶಕ್ತನು-ಅವ
ನೆಲ್ಲ ಜಯಿಸಿದ ಮುಕ್ತನು !
ಎಂಬುದನು ತಿಳಿ ; ಹಿಂಜರಿಯದಿರು. ಸಂನ್ಯಾಸಿಯೇ, ನಡೆ ಮುಂದಕೆ.
ಗುರಿಯು ದೊರಕುವವರೆಗೆ ನಡೆ, ನಡೆ ; ನೋಡದಿರು ನೀ ಹಿಂದಕೆ.
ಏಳು ಮೇಲೇಳೇಳು ಸಾಧುವೆ, ಹಾಡು ಚಾಗಿಯ ಹಾಡನು ;
ಹಾಡಿನಿಂದೆಚ್ಚರಿಸು ಮಲಗಿಹ ನಮ್ಮ ಈ ತಾಯ್ನಾಡನು !
ಹಾಡು ಸಿದ್ಧನೆ, ಓ ಪ್ರಬುದ್ಧನೆ, ಹಾಡು ಸಂನ್ಯಾಸಿ—
ಓಂ ! ತತ್ ! ಸತ್ ! ಓಂ !

೪

“ ಬೆಳೆಯ ಕೊಯ್ವನು ಬಿತ್ತಿದಾತನು ; ಪಾಪ ಪಾಪಕೆ ಕಾರಣ ;
ವೃಕ್ಷಕಾರ್ಯಕೆ ಬೀಜ ಕಾರಣ ; ಪುಣ್ಯ ಪುಣ್ಯಕೆ ಕಾರಣ ;
ಹುಟ್ಟಿ ಮೈವಡೆದಾತ್ಮ ಬಾಳಿನ ಬಲೆಯ ತಪ್ಪದೆ ಹೊರುವುದು ;
ಕಟ್ಟು ಮೀರಿಹನಾವನಿರುವನು ? ಕಟ್ಟು ಕಟ್ಟನೆ ಹೆರುವುದು ! ”
ಎಂದು ಪಂಡಿತರೆಂಬರು—ಮೇಣ್
ತತ್ತ್ವದರ್ಶಿಗಳೆಂಬರು !
ಆದೊಡೇನಂತಾತ್ಮವೆಂಬುದು ನಾಮರೂಪಾತೀತವು :
ಮುಕ್ತಿಬಂಧಗಳಿಲ್ಲದಾತ್ಮವು ಸರ್ವನಿಯಮಾತೀತವು !
ತತ್ತ್ವಮಸಿ ಎಂದರಿತು, ಸಾಧುವೆ, ಹಾಡು ಚಾಗಿಯ ಹಾಡನು !
ಹಾಡಿನಿಂದೆಚ್ಚರಿಸು ಮಲಗಿಹ ನಮ್ಮ ಈ ತಾಯ್ನಾಡನು !
ಸಾರು ಸಿದ್ಧನೆ, ವಿಶ್ವವರಿಯಲಿ ! ಹಾಡು ಸಂನ್ಯಾಸಿ—
ಓಂ ! ತತ್ ! ಸತ್ ! ಓಂ !

೫

ತಂದೆತಾಯಿಯು ಸತಿಯು ಮಕ್ಕಳು ಗೆಳೆಯರೆಂಬುವರರಿಯರು;
ಕನಸು ಕಾಣುತಲವರು ಸೊನ್ನೆಯೆ ಸರ್ವವೆನ್ನುತ ಮೆರೆವರು.
ಲಿಂಗವರಿಯದ ಆತ್ಮವಾರಿಗೆ ಮಗುವು? ಆರಿಗೆ ತಾತನು?
ಆರ ಮಿತ್ರನು? ಆರ ಶತ್ರುವು? ಒಂದೆಯಾಗಿರುವಾತನು?
ಆತ್ಮವೆಲ್ಲಿಯು ಇರುವುದು;—ಮೇಣ್
ಆತ್ಮವೊಂದಾಗಿರುವುದು.
ಭೇದವೆಂಬುವ ತೋರಿಕೆಯು ನಮ್ಮಾತ್ಮನಾಶಕೆ ಹೇತುವು.
ಭೇದವನು ತೊರೆದೊಂದೆಯೆಂಬುದನರಿಯೆ ಮುಕ್ತಿಗೆ ಸೇತುವು.
ಧೈರ್ಯದಿಂದಿದನೆಲ್ಲರಾಲಿಸೆ ಹಾಡು ಚಾಗಿಯ ಹಾಡನು!
ಹಾಡಿನಿಂದೆಚ್ಚರಿಸು ಮಲಗಿಹ ನಮ್ಮ ಈ ತಾಯ್ನಾಡನು!
ಸಾರು, ಜೀವನ್ಮುಕ್ತ! ಸಾರೈ ಧೀರಸಂನ್ಯಾಸಿ—
ಓಂ! ತತ್! ಸತ್! ಓಂ!

೬

ಇರುವುದೊಂದೇ! ನಿತ್ಯಮುಕ್ತನು, ಸರ್ವಜ್ಞಾನಿಯು ಆತ್ಮನು!
ನಾಮರೂಪಾತೀತನಾತನು; ಪಾಪಪುಣ್ಯಾತೀತನು!
ವಿಶ್ವಮಾಯಾಧೀಶನಾತನು; ಕನಸು ಕಾಣುವನಾತನು!
ಸಾಕ್ಷಿಯಾತನು; ಪ್ರಕೃತಿಜೀವರ ತೆರದಿ ತೋರುವನಾತನು!
ಎಲ್ಲಿ ಮುಕ್ತಿಯ ಹುಡುಕುವೆ?—ಏ— ೭೦
ಕಿಂತು ಸುಮ್ಮನೆ ದುಡುಕುವೆ?
ಇಹವು ತೋರದು, ಪರವು ತೋರದು; ಗುಡಿಯೊಳದು ಮೈದೋರದು.
ವೇದ ತೋರದು, ಶಾಸ್ತ್ರ ತೋರದು; ಮತವು ಮುಕ್ತಿಯ ತೋರದು!
ನಿನ್ನ ಕೈಲಿದೆ ನಿನ್ನ ಬಿಗಿದಿಹ ಕಬ್ಬಿಣದ ಯಮಪಾಶವು;
ಬರಿದೆ ಶೋಕಿಪುದೇಕೆ? ಬಿಡು, ಬಿಡು! ನಿನಗೆ ನೀನೇ ಮೋಸವು!
ಬೇಡ, ಪಾಶವ ಕಡಿದು ಕೈಬಿಡು! ಹಾಡು ಸಂನ್ಯಾಸಿ—
ಓಂ! ತತ್! ಸತ್! ಓಂ!

೭

" ಶಾಂತಿ ಸರ್ವರಿಗಿರಲಿ " ಉಲಿಯೈ, " ಜೀವಜಂತುಗಳಾಳಿಗೆ
ಹಿಂಸೆಯಾಗದೆ ಇರಲಿ ನನ್ನಿಂದೆಲ್ಲ ಸೊಗದಲಿ ಬಾಳುಗೆ !
ಬಾನೊಳಾಡುವ , ನೆಲದೊಳೋಡುವ ಸರ್ವರಾತ್ಮಸು ನಾನಹೆ ;
ನಾಕ ನರಕಗಳಾಸೆಭಯುಗಳನೆಲ್ಲ ಮನದಿಂ ದೂಡುವೆ ! "
ದೇಹ ಬಾಳಲಿ, ಬೀಳಲಿ ;—ಅದು
ಕರ್ಮನದಿಯಲಿ ತೇಲಲಿ !
ಕೆಲ್ಲರು ಹಾರಗಳಿಂದ ಸಿಂಗರಿಸದನು ಪೂಜಿಸಿ ಬಾಗಲಿ !
ಕೆಲರು ಕಾಲಿಂದೊದೆದು ನೂಕಲಿ ! ಹುಡಿಯು ಹುಡಿಯೊಳೆ ಹೋಗಲಿ !
ಎಲ್ಲ ಒಂದಿರಲಾರು ಹೊಗಳುವರಾರು ಹೊಗಳಿಸಿಕೊಂಬರು ?
ನಿಂದೆ ನಿಂದಿಪರೆಲ್ಲ ಕೂಡಲು ಯಾರು ನಿಂದೆಯನುಂಬರು ?
ಪಾಶಗಳ ಕಡಿ ! ಬಿಸುಡು, ಕಿತ್ತಿಡಿ ! ಹಾಡು ಸನ್ಯಾಸಿ—
ಓಂ ! ತತ್ ! ಸತ್ ! ಓಂ !

೮

ಎಲ್ಲಿ ಕಾಮಿನಿಯೆಲ್ಲಿ ಕಾಂಚನದಾಸೆ ನೆಲೆಯಾಗಿರುವುದೊ,
ಸತ್ಯವೆಂಬುವುದಲ್ಲಿ ಸುಳಿಯದು ! ಎಲ್ಲಿ ಕಾಮವು ಇರುವುದೊ,
ಅಲ್ಲಿ ಮುಕ್ತಿಯು ನಾಚಿ ತೋರದು ! ಎಲ್ಲಿ ಸುಳಿವುದೊ ಭೋಗವು
ಅಲ್ಲಿ ತೆರೆಯದು ಮಾಯೆ ಬಾಗಿಲಿನಲ್ಲಿಹುದು ಭವರೋಗವು ;
ಎಲ್ಲಿ ನೆಲಸದೊ ಚಾಗವು—ದಿಟ
ವಲ್ಲಿ ಸೇರದು ಯೋಗವು !
ಗಗನವೇ ಮನೆ ! ಹಸುರೆ ಹಾಸಿಗೆ ! ಮನೆಯು ಸಾಲ್ವುದೆ ಚಾಗಿಗೆ ?
ಹಸಿಯೊ, ಬಿಸಿಯೋ ? ಬಿದಿಯು ಕೊಟ್ಟಾಹಾರವನ್ನವು ಯೋಗಿಗೆ !
ಏನು ತಿಂದರೆ, ಏನು ಕುಡಿದರೆ, ಏನು ? ಆತ್ಮಗೆ ಕೊರತೆಯೆ ?
ಸರ್ವಪಾಪವ ತಿಂದುತೇಗುವ ಗಂಗೆಗೇಂ ಕೊಳೆ ಕೊರತೆಯೆ ?
ನೀನು ಮಿಂಚೈ ! ನೀನು ಸಿಡಿಲೈ ! ಮೊಳಗು ಸಂನ್ಯಾಸಿ—
ಓಂ ! ತತ್ ! ಸತ್ ! ಓಂ !

೯

ನಿಜವನರಿತವರೆಲ್ಲೊ ಕೆಲವರು ; ನಗುವರುಳಿದವರೆಲ್ಲರೂ
ನಿನ್ನ ಕಂಡರೆ, ಹೇ ಮಹಾತ್ಮನೆ! ಕುರುಡರೇನನು ಬಲ್ಲರು ?
ಗಣಿಸದವರನು ಹೋಗು, ಮುಕ್ತನೆ, ನೀನು ಊರಿಂದೂರಿಗೆ
ಸೊಗವ ಬಯಸದೆ, ಅಳಲಿಗಳುಕದೆ! ಕತ್ತಲಲಿ ಸಂಚಾರಿಗೆ
ನಿನ್ನ ಬೆಳಕನು ನೀಡೆಲೈ ;—ಸಂ-
ಸಾರ ಮಾಯೆಯ ದೂಡೆಲೈ !
ಇಂತು ದಿನದಿನ ಕರ್ಮಶಕ್ತಿಯು ಮುಗಿವವರಿಗೂ ಸಾಗೆಲೈ !
ನಾನು ನೀನುಗಳಳಿದು ಆತ್ಮದೊಳಿಳಿದು ಕಡೆಯೊಳು ಹೋಗೆಲೈ !
ಏಳು,ಮೇಲೇಳೇಳು ಸಾಧುವೆ, ಹಾಡು ಚಾಗಿಯ ಹಾಡನು !
ಹಾಡಿನಿಂದೆಚ್ಚರಿಸು ಮಲಗಿಹ ನಮ್ಮ ಈ ತಾಯ್ನಾಡನು !
ತತ್ತ್ವಮಸಿ ಎಂದರಿತು ಹಾಡೈ, ಧೀರಸಂನ್ಯಾಸಿ—
ಓಂ ! ತತ್ ! ಸತ್ ! ಓಂ !



# ಅನಾದಿಗಾನ

ಅನಾದಿಗಾನವು ನಾನು—ಹೇ
ಅನಂತಗಾಯಕನೇ—ನಿನ್ನ ‖ ಪ ‖

ರಚಿಸಿದ್ದೆ ಈ ಗಾನ ಮಾಧುರ್ಯಕಾಗಿ ನೀಂ
ವಿಶ್ವವೆಂಬುವ ಮಹಾ ನಿನ್ನ ವೀಣೆಯನು ;
ನಿನ್ನ ಸ್ಪರ್ಶನಕೆ ಆದಿಯಲಿ ಆ ಜಡವೀಣೆ
ಹಾಡತೊಡಗಿತು ನನ್ನ ಜೀವಗಾನವನು !

ಈ ಗಾನವನು ಕೇಳಿ ರವಿಚಂದ್ರತಾರಾಳಿ
ರಾಸಲೀಲೆಗೆ ತೊಡಗಿದುವು ಹರ್ಷತಾಳಿ !
ಕಾಲದೇಶಾಕಾಶ ಸತ್ಯ ಮಿಥ್ಯೆಗಳೆಲ್ಲ
ಆನಂದ ಸ್ಫೂರ್ತಿಯಲಿ ವೈತಿಳಿದುವೆಲ್ಲ !

ಗಾನವಾನಂದದಲಿ ಗಾಯಕನ ರಮಿಸುತಿದೆ ;
ಚಿರಮಧುರ ನೂತ್ನವಾ ಗೀತರಸಪಾನ ;
ಗಾನಗಾಯಕರೊಲ್ಮೆ ತೀರ್ಥದಲಿ ಲಭಿಸುತಿದೆ
ಕಲ್ಪಬುದ್ಬುದಗಳಿಗೆ ಸಂಸಾರಸ್ನಾನ !



# ಗಣೇಶ ಗಾಥಾ

## ೧. ಆಗಮನ

ನೀಲವ್ಯೋಮ ವಿಶಾಲ ಪಥದಲಿ
ಶ್ರಾವಣ ನೀರದ ನೀಲ ರಥದಲಿ
ಗೌರಿಗಣೇಶರು ಬರುವರದೊ !
ಭಾದ್ರಪದಾದಿಯ ಶಾದ್ವಲ ವೇದಿಯ
ಶ್ಯಾಮಲ ಪೃಥಿವಿಯ ಕೋಮಲ ವಕ್ಷಕೆ
ಶ್ರೀ ಕೈಲಾಸವ ತರುವರದೊ !

ಆವರ್ಕೈತರುವಾ
ಮುಗಿಲಿನ ತೇರಿಗೆ ಬೆಳ್ಳಕ್ಕಿಯ ಸಾಲೆ
ತೋರಣ ಹೂ ಮಾಲೆ ;
ಕೊಕ್ಕಿನ ಕುಂಕುಮವೆರಸಿದ ಪಸುರ್ಪಿನ
ಗಿಳಿವಿಂಡಕ್ಷತೆ ;
ತಳಿವಳು ಬನದೇವಿ,
ಹೊಸ ಅತಿಥಿಯನೋವಿ.
ಬಿತ್ತಿದ ಗದ್ದೆಯ ಬಿತ್ತರದೆದೆಯಲಿ
ಬತ್ತದ ಪೈರಿನ ಚಿನ್ನದ ಕನಸಿನ
ಕಥೆ ಹೇಳಿ
ಸುಯ್ಯನೆ ಬೀಸುತ್ತಿದೆ ಗಾಳಿ,
ಅಲೆ ಅಲೆ ಅಲೆ ಛಂದದಲಿ,
ಆಶಾಬಂಧದಲಿ.
ಸಹ್ಯಾದ್ರಿಯ ಮಳೆನೀರ್ ತುಂಬಿದ ಹೊಳೆ
ಕಾವೇರಿ
ಕೆಳಕೆಳಗಿಳಿಯುವ ತೇರಿನೊಳಮ್ಮನ
ತೊಡೆಯೇರಿ
ಕುಳಿತ ಗಣೇಶನ ಕಣ್ಣಿನಚ್ಚರಿಗೆ
ರಜತ ರೇಖೆಯೊಲು ತೋರಿ

ಹರಿಯುತ್ತಿರುವಳು ಕನ್ನಡ ತಾಯಿಯ
    ತುಂಬೆದೆ ಸೂಸಿದ ಸುಕುಮಾರಿ !

ಆ ಮುಗಿಲಿನ ತೇರ್
ನೇಸರ್ ತಿಂಗಳ್ ಅರಿಲುಗಳೂರನು ದಾಟಿ,
ಸಾಗರ ಮುದ್ರಿತ ಪೃಥಿವೀ ಗೋಲವ ಸುತ್ತಿ,
ನಾನಾ ದೇಶದ ನಾನಾ ದೃಶ್ಯವ ನೋಡಿ ;—
ಪುಣ್ಯಾ ಹಿಮಾಚಲ ಶಿರ ಶಿಖರದೊಳವತರಿಸಿ
ಭಾರತಭೂಮಿಯ ಗಿರಿನದಿವನಗಳ ಚರಿಸಿ,
ಕಡೆಗೈತಂದಿದೆ ಕನ್ನಡನಾಡನ್ ವರಿಸಿ,
ಕೈಲಾಸವನುಳಿದೈತಂದವನನ್,
        ಕಂದಾ ನಿನ್ನನ್ ಸ್ಮರಿಸಿ !

ಸುತ್ತುತ್ತಿಳಿವಾ ಮುತ್ತಿನ ತೇರ್
ಹತ್ತಿರೆ ಹತ್ತಿರೆ ಬರುತಿದೆ ಪಾರ್ ;
ಶ್ರಾವಣದಂತ್ಯ ಪ್ರಾತಃಕಾಲದ
    ಚಿನ್ನದ ಬಿಸಿಲಲಿ ತಳಿಸುವ ತೇರ್ ;
ಭಾದ್ರಪದಾನಿಲ ಪಕ್ಷಗಳೋಲಿಹ
    ಜಲಧರ ಹಂಸಗಳೆಳೆಯುವ ತೇರ್ ;—
ನದೀ ಶರಾವತಿ ಗೇರುಸೊಪ್ಪೆಯಲಿ
    ಧುಮುಧುಮುಕುವವೋಲಿಳಿಯುವ ತೇರ್ ;
ಬೇಲೂರಿನ ದೇವಾಲಯ ರಚನೆಗೆ
    ಕನ್ನಡಿ ಹಿಡಿದಿಹ ಕನ್ನಡ ತೇರ್ ;—
ಅಡಕೆಯ ಹೂವಿನ ಹಿಂಗಾರದ ತೇರ್ ;
ತೆಂಗಿನ ಹೂವಿನ ಬಂಗಾರದ ತೇರ್ ;
ಬಾಳೆಯ ಹೂವಿನ ಸಿಂಗಾರದ ತೇರ್ ;
ಮಲ್ಲಿಗೆ ತಾವರೆ ಸಂಪಗೆ ಕೇದಗೆ
    ಸೇವಂತಿಗೆ ಸೀತಾಳಿಯ ತೇರ್ ;
ಮಾವಿನ ಹಲಸಿನ ತಳಿರಿನ ತೋರಣ
    ಮಿಳಿರುವ ಚಂದದ ಗಂಧದ ತೇರ್ ;—

ಸುತ್ತುತ್ತಿಳಿವಾ ಮುತ್ತಿನ ತೇರ್
   ಬಂತದೊ, ಬಂತದೊ, ಬಂತದೊ, ಪಾರ್ !

ಪೋ, ಬಳಿಸಾರ್ ; ಬಾ, ಬಾ, ಬಾ, ಬಳಿಸಾರ್ ;
ಇಳಿಯಿತು, ನೆಲಮುಟ್ಟಿತು ದೇವರ ತೇರ್ !
ಅದೆ ಕಾಣ್ ಪರಮೇಶ್ವರಿ, ಶಿವೆ, ಗೌರಿ,
ಶುಭಕರಿ, ಶಂಕರಿ, ಶೈಲಕುಮಾರಿ.
ಆಕೆಯೆ ಕೈಲಾಸದ ಮಾರಾಣಿ ;
ಕಠೋರತಪದಿಂ ರುದ್ರ ಕಪರ್ದಿಯ
ಕಳೇಬರಾರ್ಧವ ಪಡೆದ ಶಿವಾಣಿ.
ವಿಶ್ವವತ್ಸಲತೆ ಮೆಯ್ವೆತ್ತಾಕೆಯೆ
      ಮೂಲೋಕದ ಮಾತಾಯಿ ;
ಕಾಲ್ವಿಡಿ, ಕೈಮುಗಿ ; ಒಲಿ, ನಲಿ, ಮಣಿ, ಕುಣಿ ;
      ಮುತ್ತಿಡುವಳೊ ಮಾತಾಯಿ !
ವಿದ್ಯಾಮೂರ್ತಿ ಗಣೇಶನ ತಾಯಿ,
ಕಂದಾ,
ಬುದ್ಧಿಯನೀವಳೊ ನಿನಗೆ ಮಿಠಾಯಿ !
ಸುರ ಸೇನಾಪತಿ ಕುಮಾರ ಸ್ವಾಮಿಯ
         ಪಡೆದಾ ಮಾತಾಯಿ
ಕ್ಷಾತ್ರತೇಜದಾ ಖಡ್ಗವನಾತ್ಮಕೆ
         ಮಾಳ್ಪಳೊ ವೀರ ತುರಾಯಿ !
ತಪಸ್ವಿ ಶಿವನನೆ ತಪದಿಂ ಗೆಲ್ದಾ
         ಮಹಾ ತಪಸ್ವಿನಿ ಕಲ್ಯಾಣಿ,
ಕೇಳ್, ತಂಗೀ,
ಮನದನ್ನನ ಮನವೊಲಿಸುವ ಕಲೆಯನೆ
   ಕೊರಳಿಗೆ ಮಾಳ್ಪಳ್ ಕಟ್ಟಾಣಿ !
ಎಲ್ಲರು ಬನ್ನಿ ; ಎಲ್ಲರು ಬನ್ನಿ ;
ಹಿರಿಯರು ಬನ್ನಿ ; ಕಿರಿಯರು ಬನ್ನಿ ;
      ಸೆರುವರು ಐತನ್ನಿ :

"ನಮಸ್ಕಾರ! ನಮಸ್ಕಾರ!
ನಮಸ್ಕಾರ!" ಎನ್ನಿ !

"ನಮಸ್ಕಾರ, ನಮಸ್ಕಾರ,
ನಮಸ್ಕಾರ, ದೇವಿ!
ಮಕ್ಕಳು ನಾವ್ ಚಿಕ್ಕವರನ್
ಅಕ್ಕರೆಯಿಂದೋವಿ,
ಪೊರೆ ತಿರೆಯನ್ ; ಪೊರೆ ನೆರೆಯನ್ ;
ಪೊರೆ ನಮ್ಮನ್, ತಾಯಿ!
ತಂದೆಯ ಕಾಯ್, ತಾಯಿಯ ಕಾಯ್,
ಒಲವನ್ ಕಾಯ್, ತಾಯಿ!
ನಮಸ್ಕಾರ, ನಮಸ್ಕಾರ,
ನಮಸ್ಕಾರ, ದೇವಿ!"

## ೨. ಆತಿಥ್ಯ

ಓಂ ಮಂಗಳ, ಹ್ರೀಂ ಮಂಗಳ, ಓಂ ಹ್ರೀಂ ಓಂ!
ಓಂ ಸತ್ಯಕೆ, ಹ್ರೀಂ ಧರ್ಮಕೆ, ಓಂ ಹ್ರೀಂ ಓಂ!
ಒಲವಿಗೆ ಓಂ, ಚೆಲುವಿಗೆ ಓಂ, ಓಂ ಓಂ ಓಂ!
ಶಾಂತಿಗೆ ಓಂ, ಸತ್ವಕೆ ಓಂ, ಓಂ ಓಂ ಓಂ!
ವೀಣೆಯ ತನ್ನಿ ; ಪಿಟೀಲನು ತನ್ನಿ ;
ನಾಗಸ್ವರ ಸುರವೇಣುವ ತನ್ನಿ.
ಸಮುದ್ರ ಮಂದ್ರ ಮೃದಂಗವ ತನ್ನಿ ;
ಗಂಭೀರಾಂಬುದ ಭೇರಿಯ ತನ್ನಿ.
ವೈಣಿಕ ವರ್ಯನ, ಗಾಯಕ ವರ್ಯನ,
ಕವಿ ಚಕ್ರೇಶನ ಕರೆತನ್ನಿ ;
ಜಗನ್ಮಾತೆಗೆ ಗಣೇಶಗಾಥೆಯ
ಹಾಡುವ, ಕುಣಿದಾಡುವ, ಬನ್ನಿ.
ಜಯವೆನ್ನಿ!
ಶುಭವೆನ್ನಿ!

ಅರ್ಘ್ಯವ ತನ್ನಿ ; ಪಾದ್ಯವ ತನ್ನಿ ;
ಧೂಪ, ದೀಪ, ಪುಷ್ಪ, ಗಂಧ,
  ಓಕುಳಿಯನು ತನ್ನಿ.
ಅಮ್ಮಗೆ ಕುಶಲವೆ ? ಅಯ್ಯಗೆ ಕುಶಲವೆ ?
ತಂಗಿ, ತಮ್ಮ, ಅಕ್ಕ, ಅಣ್ಣ,
  ಕುಶಲವೆ ಪಿತೃಗಳಿಗೆನ್ನಿ.
ಕೈಲಾಸಾದ್ರಿಗೆ ಕುಶಲವೆ ಕೇಳಿ.
ಲಕ್ಷ್ಮೀ ಸ್ವಾಮಿಗೆ ಸೌಖ್ಯವೆ ಕೇಳಿ.
ವಾಣೀಪ್ರಿಯನಿಗೆ ಶಾಂತಿಯೆ ಕೇಳಿ.
ಲೋಕೇಶ್ವರರಿಗಶೋಕವೆ ಕೇಳಿ.
ಕ್ಷೇಮಂಕರನಿಗೆ ಆ ಶಂಕರನಿಗೆ
  ಸುಕ್ಷೇಮವೆ ಅದನೂ ಕೇಳಿ !
"ಕುಶಲ ! ಸೌಖ್ಯ ! ಶಾಂತಿ ! ಕ್ಷೇಮ !"
ಎಂಬಾ ಉತ್ತರಗಳೆ ವರವಾಗಲ್,
ಕೇಳ್ದರಿಗಾಶೀರ್ವಾದಗಳಾಗಲ್,
  ಮಾತೆಗೆ ವಂದಿಸಿ ಮುದತಾಳಿ !

ಬುದ್ಧಿ ಗಣೇಶಾ, ಸಿದ್ಧಿ ಗಣೇಶಾ,
ಬಾರ, ಗಣೇಶಾ, ದೇವಕುಮಾರ !
ವಿದ್ಯಾರ್ಥಿಯ ಸಖ, ಹೇ ವಿದ್ಯಾಸುಖ,
  ಬಾರ, ವಿನಾಯಕ, ಬಾರ ;
ಗೌರಿಯ ಹಣೆಯಾ ಕುಂಕುಮವೊತ್ತಿಹ
  ಇಭಮುಖ ಕಮಲವ ತೋರ ;
ಬ್ರಹ್ಮಚರ್ಯದಾ ಸಂಯಮ ಸಂಭವ
  ವಿದ್ಯುತ್ ತೇಜವ ತಾರ ;
  ಬಾರ, ಗಣೇಶಾ, ಬಾರ !
ಕೈಕಾಲ್ ತೊಳೆಯಲು ಬಿಸಿನೀರಿದೆ ಕೋ ;
  ಒದ್ದೆಯನಾರಿಸೆ ವಸ್ತ್ರವ ಕೋ.
ಶ್ರಾವಣ ನೀರದಯಾತ್ರೆಯ ದೂರದ
  ದಣಿವಾರಿಸೆ ತೃಣಮಂಚವ ಕೋ.

ಕಡುಬಿದೆ ಕೊಳ್ ; ಕಾಯಿದೆ ಕೊಳ್ ;
ಬಾಳೆಯ ಹಣ್ಣಿದೆ; ಹಲಸಿನ ಹಣ್ಣಿದೆ,
ಮಾವಿನ ಹಣ್ಣಿದೆ ಕೊಳ್ ;
ಕಿತ್ತಿಳೆ ತೊಳೆಯಿದೆ ಕೊಳ್.—
ಹಾಲಿದೆ ಕೋ ; ಜೇನಿದೆ ಕೋ ;
ಕಬ್ಬಿನ ರಸವಿದೆ ಕೋ.
ಬೆಲ್ಲವ ಕೋ ; ಬೆಣ್ಣೆಯ ಕೋ ;
ಹೆಪ್ಪಿನ ಮೊಸರಿದೆ ಕೋ.
ಶ್ಯಾಮಿಗೆ ಪಾಯಸ ಕಾಯ್‌ಹಾಲ್ ಇದೆ ಕೋ.
ಯಾವುದು ಬೇಕೋ ? ಯಾವುದು ಸಾಕೋ ?
ಹೇಳಣ್ಣಾ, ನಾಣ್ ನಿನಗೇಕೋ ?
ರಜತಾದ್ರಿಯ ಸಿರಿಯನು ಕಂಡವ ನೀನ್
ನಮ್ಮ ಬಡತನಕೆ ಪೇಸುವೆಯೇನ್ ?
ನಿನ್ನ ತಂದೆಯಾ ಭಿಕ್ಷಾಟನೆಯನೆ
ಕೈಕೊಂಡಿಹಳಯ್ ಭಾರತಿ ತಾನ್ !
ನಿನ್ನಯ ಕೃಪೆಯಿರೆ, ದೇವಿಯ ಕೃಪೆಯಿರೆ,
ಕೈಲಾಸೇಶ್ವರ ಕೃಪೆಯಿರಲು,
ಸುರಸೇನಾಪತಿ ಕುಮಾರಸ್ವಾಮಿಯ
ಧೀರ ಕ್ಷಾತ್ರದ ಕೃಪೆಯಿರಲು,
ಬರುವಾ ಕಾಲಕೆ ಭಾರತ ಮಾತೆಗೆ
ಸ್ವಾತಂತ್ರ್ಯದ ಶ್ರೀಯೈತರಲು,
ಕಾಮಧೇನುವಿನ ಕೆಚ್ಚಲಿನಮೃತವ
ಕೊಡುವೆವೊ ಬೆಳ್ಳಿಯ ಬಟ್ಟಲಲಿ !
ಕಲ್ಪವೃಕ್ಷದಾ ರಸಘನ ಫಲವನೆ
ಇಡುವೆವೊ ಚಿನ್ನದ ತಟ್ಟೆಯಲಿ !
ಸ್ಕಂದನ ಹೋಲುವ ಧುರಧರವೀರರ್,
ನಿನ್ನನೆ ಹೋಲುವ ಸನ್ಮತಿ ಧೀರರ್,
ಭಾರತಾಂಬೆಯಾ ಕೀರ್ತಿಯ ಶೂರರ್
ಹುಟ್ಟಲಿ ಅವಳಾ ಹೊಟ್ಟೆಯಲಿ !

ಹಬ್ಬದ ಸಂತೋಷಕೆ ಬಂದತಿಥಿಗೆ
  ಕೊರತೆಯನೊರೆದೆನ್, ತಪ್ಪಾಯ್ತು !
ನಾಡಿನ ಎದೆಯನ್ ಕೊರೆಯುವ ನೋವಿಗೆ
  ನಾಲಗೆಯಿತ್ತೆನ್ ; ತಪ್ಪಾಯ್ತು !
ಬಡತನವಿರಲಿ, ದಾಸ್ಯವೆ ಇರಲಿ,
ಸಂಕಟವಿರಲಿ, ಏನೇ ಇರಲಿ,
  ನಮ್ಮಾತಿಥ್ಯಕೆ ಕುಂದಿಲ್ಲ.
ಈ ಸ್ಥಿತಿಯಲ್ಲೂ ಈ ಗತಿಯಲ್ಲೂ
ಪುಣ್ಯಭೂಮಿಯಿೂ ಮಕ್ಕಳು ಕೊಡುವಾ
  ದಿವ್ಯಾತಿಥ್ಯಕೆ ಸಮನಿಲ್ಲ :
ಬೇರೆ ನಾಡುಗಳಿಗೆಲ್ಲಿಗೆ ಹೋಗು
ವಂಚನೆ ಕೋಟಲೆ ಹಿಂಸೆಯ ಕೂಗು !
ಇನ್ನುಳಿದಾರೊಳ್ ವೇದ ಉಪನಿಷತ್
ಭಾರತ ರಾಮಾಯಣಗಳ ರಸ ಸತ್ ?
ನಮ್ಮ ಮಹಾತ್ಮನ್ ಮತ್ತೆಲ್ಲಿಹನಯ್ ?
ಆ ಮುಕ್ತಾತ್ಮನ ಕೃಪೆ ಹಿಡಿದರೆ ಕಯ್
ಬಂಧನವೂ ಸ್ವಾತಂತ್ರ್ಯಕೆ ಮಿಗಿಲಯ್ !
ಇದು ಪಾಶ್ಚಾತ್ಯರ ನೆಲದೊಲವಲ್ಲಯ್ ;
ಈ ಹೆಮ್ಮೆಗೆ ಪರಮಾರ್ಥವೆ ಉಸಿರಯ್ !
ಅದರಿಂದಾಮರ್ಪಿಪ ನೈವೇದ್ಯಮ್
  ಇನ್ನುಳಿದಾರ್ಗಂ ದುಸ್ಸಾಧ್ಯಮ್ :
ಆತ್ಮದ ಬೆಳ್ಳಿ, ಆತ್ಮದ ಚಿನ್ನ,
ಪುಣ್ಯಾಲೋಚನೆಗಳ ಪರಮಾನ್ನ,
  ನಾಂ ನಿಮಗಿಕ್ಕುವ ಅಮೃತಾನ್ನ !—
ವಾಗ್ದೇವಿಯ ವಾತ್ಸಲ್ಯದ ವತ್ಸನ್
ರಚಿಸುತ್ತಿಹ ಹೊಸ ರಾಮಾಯಣವನ್
    ಓದುವೆ ಬಾ, ತಾಯಿೂ.
ಕೈಲಾಸದೊಳೂ ಯಾರೂ ಕೇಳದ
ಹೊಸಗನ್ನಡ ಹೊಸ ಹೊಸ ಹಾಡುಗಳನ್
  ಹಾಡುವೆ ಕೇಳ್, ತಾಯಿೂ.

ನೀನೂ ನಿನ್ನೀ ಮಗುವೂ ಕೇಳಲ್
ಮತ್ಕೃತಿ ಕೃತಕೃತ್ಯಮ್ !
ನಿವ್ಮಿರ್ವರ ಬಗೆಯೊಳಗದು ಬಾಳಲ್
ನನ್ನಾ ಕೃತಿ ಸತ್ಯಮ್ ;
ಮೇಣ್ ನಿತ್ಯಮ್ :
ದೇವರ ಕಿವಿ ಕೇಳಲ್,
ದೇವರ ಬಗೆ ತಾಳಲ್,
ಕವಿಕಲ್ಪನೆ ತಾಂ ಘನತರ ಸತ್ಯಮ್ !
ಕೇಳ್, ಸತ್ಯಕೆ ಸತ್ಯಮ್ !

## ೩. ಪ್ರಯಾಣ

ಏತರ ವೈರಾಗಿಯೊ ಅವನು !
ನೀವ್ ಬಂದೆಲ್ಲಾ
ವಾರವು ಮುಗಿದಿಲ್ಲ.
ದೂತರ ಹಿಂಗಡೆ ದೂತರನಟ್ಟಿ,
ಅಲ್ಲಿಗೆ ಇಲ್ಲಿಗೆ ಸೇತುವೆ ಕಟ್ಟಿ,
ಕಾತರನಾದನೆ ಪರಶಿವನು ?
ಯೋಗಕ್ಷೇಮವೊ ? ಯೋಗಿಯ ಪ್ರೇಮವೊ ?
ಯಾವುದೊ ? ನಮಗಿನಿತನು ತಿಳುಹಿ.
ಸತಿಗೋ ? ಸುತಗೋ ? ಅಂತೂ ವಿರಹಿ
ಯತಿಗಳ ಯತಿಯಾಗಿಹ ಅವನೂ !
ಇಂದೇ ಬೀಳ್ಕೊಳ್ಳುವಿರೇನ್, ತಾಯಿ ?
ಬೀಳ್ಕೊಳಿ ಎನ್ನಲ್ ಬರುವುದೆ ಬಾಯಿ ?
ಸ್ವರ್ಗವೆ ಕಿಂಕರವಾಗಿತ್ತೆಮಗೆ ;
ಕೈಲಾಸವೆ ಕಯ್ಗೂಡಿತ್ತೆಮ್ಮಾ ಬಡಮನೆಗೆ,
ತಾಯಿ, ನೀವೈತಂದು ;
ನಿಮ್ಮಾ ಸಂಗದ ಪುಣ್ಯಸ್ಮರಣೆಯೆ ಜೊತೆಬಂದು
ಸವಿಸೊದೆಯಾಗಲಿ ಈ ವಿಷು* ಸಂವತ್ಸರವೊಂದು.

* ೨೬-೮-೧೯೪೧.

ಸುಖವಾಗಲಿ ಗಾಳಿಯ ಬಟ್ಟೆಯ ಪಯಣಂ ;
ಸುಖವಾಗಲಿ ಮೋಡದ ನಾಡಿನ ಪಯಣಂ ;
ಸುಖವಾಗಲಿ ರವಿ ಶಶಿ ತಾರೆಯ ಪಯಣಂ ;
ಸುಖವಾಗಲಿ ಕೈಲಾಸಕೆ ಶ್ರೀ ಪಯಣಂ !

ದೇವರ ದೇವಗೆ, ಲೋಕವ ಕಾವಗೆ,
ಕಯ್ ಮುಗಿದೆವು, ಹೇಳಿ.
ತೃಪ್ತಿಯ ಕೃಪೆಗೂ ಶಾಂತಿಯ ಕೃಪೆಗೂ
ವಂದಿಸಿದೆವು, ಹೇಳಿ.
ವರುಷ ವರುಷವೂ ತಮ್ಮಿರ್ವರನೂ
ತಪ್ಪದೆ ಕಳಿಸುವ ಕೃಪೆಮಾಡಲ್
ತಪ್ಪದೆ ನೀವ್ ಹೇಳಿ.
ವರುಷ ವರುಷವೂ ನಮ್ಮೆಲ್ಲರನೂ
ತಪ್ಪಿರೆ ಮನ್ನಿಸಿ ಕಾಪಾಡಲ್
ತಪ್ಪದೆ ನೀವ್ ಕೇಳಿ.
ನೀವ್ ಬರದಿದ್ದರೆ, ನೀವ್ ತರದಿದ್ದರೆ,
ದರಿದ್ರಮೀ ಧರೆ, ದೇವಿ !
ತಪ್ಪದೆ ಬನ್ನಿ ; ತಪ್ಪದೆ ಬನ್ನಿ ;
ತಪ್ಪದೆ ನಮ್ಮನ್ ಓವಿ !
ನಮಸ್ಕಾರ, ನಮಸ್ಕಾರ,
ನಮಸ್ಕಾರ, ದೇವಿ !—
ಏರಿತು ತೇರ್, ಮೋಡದ ತೇರ್,
ನೋಡದೊ ದೂರ, ದೂರ, ದೂರ.
ನಮಸ್ಕಾರ, ನಮಸ್ಕಾರ,
ಶಿವಕುಮಾರ !
ನಮಸ್ಕಾರ, ನಮಸ್ಕಾರ,
ನಮಸ್ಕಾರ !

# ಮಂಗಳಾರತಿ

ಮೇರೆಯೆ ಇರದಾಕಾಶ ಸಮುದ್ರದಿ
ಸೂರ್ಯನ ಜ್ಯೋತಿರ್ಮೂರ್ತಿಯ ಸುತ್ತಿ
ಶಾಶ್ವತ ಮಂಗಳದಾರತಿಯೆತ್ತಿ
ತೇಲುತ್ತಿದೆ ಭೂಮಿಯ ಹಣತೆ!
ನರದೇಹವೆ ಆ ಹಣತೆಗೆ ಬತ್ತಿ;
ಆತ್ಮಜ್ವಾಲೆಯ ದಳ್ಳುರಿ ಹೊತ್ತಿ
ಭವ್ಯಾಕಾರದ ಜಿಹ್ವೆಯನೆತ್ತಿ
ನಾಕದ ನೀಲವ ನೆಕ್ಕುತಿದೆ!
ಮಿಥ್ಯೆಯ ದಹಿಸುತ ಮುಕ್ಕುತಿದೆ!
ಧರ್ಮದ ಕರ್ಮದ ಪ್ರೀತಿಯ ನೀತಿಯ
ಕಾವ್ಯದ ಗಾನದ ನಾನಾ ರೀತಿಯ
ತೈಲಗಳನುದಿನ ಬೀಳುತಿವೆ!
ಭೂಮಿಯ ಹಣತೆಗೆ ಬೀಳುತಿವೆ!
ದೇಹದ ಬತ್ತಿಯಿನಾತ್ಮಜ್ವಾಲೆಯ
ರೂಪದೊಳನುದಿನ ಬಾಳುತಿವೆ!
ಸ್ವರ್ಗದ್ವಾರಕೆ ಏಳುತಿವೆ!



# ದೇವಕೇತು*

೧

ಓಡಿದೆ ನಾ
ಹಗಲಿರುಳೇಣಿಯ ಧುಮುಧುಮುಕಿಳಿದು ;
ಓಡಿದೆ ನಾ
ಕೋಟಿ ಕಮಾನಿನ ಕಾಲವ ತುಳಿದು ;
ಓಡಿದೆ ನಾ
ನುಗ್ಗುತ್ತಾಶಾ ಮಂಟಪ ತತಿಗೆ
ನಲ್ಮೆಯ ತೆರೆ ಮೇಲಾಡುತ್ತಂ
ಮುಗ್ಗಿ ನಿರಾಶಾ ಶೈಲಕ್ಷಿತಿಗೆ
ನೋವಿನ ನದಿಯೊಳಗಾಳುತ್ತಂ,
ಮನಸಿನ ಗುಹೆಯಾ ಮಾ ಪಾತಾಳದಿ
ಜಟಿಲ ವಿರೂಪದ ಶತಪಥ ಜಾಲದಿ
ದೈತ್ಯಾಕಾರದ ತಿಮಿರ ವಿಕಾರದ
ಭಯ ಭೇತಾಳದ ಬೆನ್ನೇರಿ,
ಓಡಿದೆ ನಾ
ದೇವಕಿರಾತನ ಮೃಗಯಾ ಪದದಿಂ
ಯಮ ಗಮನದ ಸ್ವರ್ಗಶ್ವಾಪದದಿಂ
ತೆರೆವಾಯ್ ಜಿಹ್ವೆಯ ಸರಮಾ ರದದಿಂ
ದೂರಕೆ, ನಿಡುದೂರಕೆ ಹಾರಿ !

೨

ನಿಶ್ಚಯ ಗತಿಯಿಂ
ದೃಢಹತ ಮತಿಯಿಂ
ವಿದ್ಯುದ್ವೇಗದ ಸ್ವರ್ಗಶ್ವಾನಂ
ಬಂದುದು ಅಟ್ಟಿ,
ಬಂದುದು ಮುಟ್ಟಿ ;

---

* **Francis Thompson** ಕವಿಯ '**The Hound of Heaven**' ಎಂಬ ಕವನದ ರೂಪಾಂತರ.

ಕೇಳದೊ ಕರ್ಕಶ ಕಂಠಧ್ವಾನಂ!
"ನನ್ನಾ ವೈರಿಗೆ ಪ್ರೇಮಿಗಳಿಲ್ಲ:
ನನ್ನಾ ದ್ರೋಹಿಗೆ ದ್ರೋಹಿಗಳಿಲ್ಲ!"

೩

ಹೃದಯದ ನಾನಾ ರಮ್ಯ ಗವಾಕ್ಷಕೆ
ಪೀತಾಂಬರವುಡಿಸಿ,
ಮಣಿ ತೋರಣ ತೊಡಿಸಿ,
ದಾನದ ಧರ್ಮದ ಬಿಡಿ ಹೂ ನೆಯ್ದು;
ಪತಿತನವೋಲಾಂ ಪ್ರಾರ್ಥನೆ ಗೆಯ್ದು.

(ಸ್ವರ್ಗ ಶ್ವಾನ ಪ್ರೇಮವನರಿತೂ
ಸುಮನೋಕೇತುಗೆ ಬೆದರಿದ್ದೆ;
ಬರಲವನನ್ಯಕ್ಕೆಲ್ಲಾ ಶೂನ್ಯಂ
ಎಂದವಿಚಾರದಿ ಹೆದರಿದ್ದೆ.)

ಬಿಚ್ಚಲ್ಕಗಲಕೆ ಗವಾಕ್ಷ ಭಾಗಂ
ಮುಚ್ಚಿತ್ತವನಾಗಮನದ ವೇಗಂ:
ಅಪ್ಪಲಾಶಿಸಿದಂತೆ ಪ್ರೀತಿ
ತಪ್ಪಲಾಶಿಸಲಿಲ್ಲ ಭೀತಿ.

೪

ಜಗದಂಚಿನ ತುದಿಯಾಚೆಗೆ ದಾಟಿದೆ;
ಮುಗಿಲಾಕಾಶದ ಮೋರೆಯ ಮೀಟಿದೆ;
ತಾರಾಲೋಕದ ಸ್ವರ್ಣದ್ವಾರದಿ
ಢಣ್ಣನೆ ನೂಂಕಿದೆನಾಶ್ರಯಕೆ;
ಚಂದ್ರ ಮಂಡಲದ ಚಂದ್ರಶಾಲೆಯಲಿ
ಠಣ್ಣನೆ ಘಂಟೆಯ ಘೋಷಿಸಿದೆ.
ಬೆಳಗಿಗೆ ಬೇಗೆಂದೆ:
ಸಂಧ್ಯಾ ಸುಂದರ ಕುಸುಮ ದುಕೂಲದಿ
ಮರೆಮಾಡೆನ್ನಂ ಬೇಗೆಂದೆ.
ಬೈಗಿಗೆ ಹೋಗೆಂದೆ:

ಪ್ರೇಮ ಭಯಂಕರ ರಾಹುವಿನೆನ್ನಂ
ರಕ್ಷಿಸೆ ಬೇಗನೆ ಹೋಗೆಂದೆ.
ಆತನ ದೂತರನಾಶ್ರಯ ಬೇಡಿದೆ
ನಾನಾ ಲೋಭದ್ರೋಹದಲಿ :
ಸ್ವಾಮಿಭಕ್ತರವರೆನ್ನನೆ ವಂಚಿಸಿ
ಮೆರೆದರು ಮೋಸದ ಸೇವೆಯಲಿ,
ದ್ವೇಷಪ್ರೇಮದಲಿ.

ಗಾಳಿಯ ಬೇಡಿದೆ ; ಮಿಂಚನು ಕೋರಿದೆ ;
ವೇಗದ ಕೇಸರವನೆ ತುಡುಕೇರಿದೆ.
ಬಾನ್ನೀಲಿಯ ಹೆಬ್ಬಯಲನೆ ಅಲೆಯಲಿ,
ಮುಗಿಲಿನ ತೇರಿನಲಿ
ಗುಡುಗಿನ ಸಾರಥಿ ಸಿಡಿಲಿನ ಕುದುರೆಗೆ
ಬಡಿಯಲಿ ಮಿಂಚಿನಲಿ,
ಅಪ್ಪಲಾಶಿಸಿದಂತೆ ಪ್ರೀತಿ
ತಪ್ಪಲಾಶಿಸಲಿಲ್ಲ ಭೀತಿ.

೫

ನಿಶ್ಚಯ ಗತಿಯಿಂ
ದೃಢಹಠ ಮತಿಯಿಂ
ವಿದ್ಯುದ್ವೇಗದ ಸ್ವರ್ಗಶ್ವಾನಂ
ಬಂದುದು ರೇಗಿ
ಬಂದುದು ಕೂಗಿ ;
ಕೇಳದೊ ಕರ್ಕಶ ಕಂಠಧ್ವಾನಂ :
“ ನನಗಾಶ್ರಯವೀಯದ ನಿನಗೆಲ್ಲಿ
ವಿಶ್ವದೊಳನ್ಯಾಶ್ರಯವಿನ್ನೆಲ್ಲಿ ? ”

೬

ತೃಪ್ತಿಯನರಸಿದೆನಯ್ಯೋ ವ್ಯರ್ಥಂ
ನರಯೌವನ ಮುಖ ರಂಗದಲಿ.

ಆದರದೇನದೊ ಮಿನುಗಿತ್ತದೊ ಆ
ಶಿಶು ನಯನದ ದಿವ್ಯಾಂಗದಲಿ :
ದಿಕ್ಕಿಲ್ಲದೆದೆಗೆ ಮಕ್ಕಳೆ ದಿಕ್ಕು ;
ದುಃಖವನಳಿಸುವುದವರದೆ ಹಕ್ಕು
ಎಂದಾ ಕಡೆ ತಿರುಗಿತು ಆಸೆ.
ಮುದ್ದುಗಣ್ಗಳಲಿ ಮೂಡುತ್ತಿತ್ತು,
ಏನೋ ಉತ್ತರವಾಡುತ್ತಿತ್ತು
ಪ್ರತ್ಯುತ್ತರ ಭಾಷೆ :
ಅಯ್ಯೋ ಭೋಂಕನೆ ದುರ್ವಿಧಿ ಬಿತ್ತು ;
ಆ ಕಣ್ ಬೆಳಕೂ ಮುಚ್ಚಿತ್ತು !
“ ಮರ್ತ್ಯರ ಮಕ್ಕಳೆ, ಹೋದರೆ ಹೋಗಿ. ”
ನೊಂದೆಂದೆನು ರೇಗಿ,
“ ಪ್ರಕೃತಿಯ ಪುತ್ರರೆ, ನೀವೈತನ್ನಿ ;
ತುಟಿಯಂ ತುಟಿಗೊತ್ತುತೆ ಬನ್ನಿ,
ಮುತ್ತಿಡುತ್ತೈತನ್ನಿ.
ಬನ್ನಿರಿ ಎದೆಗೆದೆಯನ್ನೊತ್ತಿ,
ತೋಳ್ ಸುತ್ತಿ.
ಕೆದರಲಿ ತುಂಬಿಯ ಮುಂಗುರುಳು ;
ಸಿಂಗರಿಸಲಿ ಹೊಸ ಹೂವರಳು ;
ತುಂಬಲಿ ನಿಮ್ಮೆದೆಯಂ ಮಕರಂದಂ,
ತುಂಬಲಿ ನಿಮ್ಮೊಡಲಂ ಪೂವಂದಂ,
ತುಂಬಲಿ ಲೋಕವನಮರಾನಂದಂ ! ”
ತುಂಬಿತು ಬಯಸಿದವೋಲಂತೆ :
ನನಗೊದಗಿತು ಸುಖಸಂಗದ ಸಂತೆ ;
ಪ್ರಕೃತಿಯೆ ತಾನಾದಳು ಸುರಕಾಂತೆ.
ಗಗನ ವದನ ಮಣಿನೀಲೋತ್ಪಲದಿ
ಮುಗಿಲಿಂದಿಂದಿರ ಲೀಲೆಯ ಕಂಡೆ ;
ಸಾಗರ ಪರ್ವತ ನದಿವನ ಕುಲದಿ
ಹೃದಯದ ನಾನಾ ರಸಗಳನುಂಡೆ ;
ಹಗಲಿನ ಕಡೆಯಲ್ಲಿ

ಮುಳುಗುವ ಸೂರ್ಯನಿಗೋಕುಳಿ ಹೊಯ್ದು,
ಗಗನದ ಗುಡಿಯಲ್ಲಿ
ತಾರೆಯ ಸೊಡರಿನ ಮಾಲೆಯ ನೆಯ್ದು
ಧ್ಯಾನಿಪ ಸಂಧ್ಯಾಮೌನದಲಿ
ಮೌನಿಯಾದೆ ನಾ ಧ್ಯಾನದಲಿ.
ಪ್ರಾತಃ ಸುಂದರ ರಾಗಸಮುದ್ರದಿ
ಮಿಂದೆನು ವಿಹಂಗಗಾನದಲಿ,
ನಲಿದೆನು ತರಂಗಸ್ನಾನದಲಿ.
ಪ್ರಕೃತಿಯ ಜತೆಯಲಿ ಮರುಗಿದೆ, ನಲಿದೆ,
ಮುದ್ದಾಡಿದೆನೊಡನಾಡಿದೆನೊಲಿದೆ.
ಮರ್ತ್ಯದ ಮುಖವನಮರ್ತ್ಯದ ಮುಖಕೆ
ಚಾಚಿದೆ ; ಆ ತ್ರಿದಶಾಮೃತ ಸುಖಕೆ
ಸಂಗಮಿಸಿತು ಈ ಲೋಕಾಶ್ರು,
ಶೋಕದ ಲವಣಾಶ್ರು.
ಸಾಯಂ ವಕ್ಷದ ಜ್ವಾಲಾಹೃದಯಕೆ
ನನ್ನೆದೆಯನ್ನೊತ್ತಿ,
ಬಯಕೆಯ ಕೊರಳೆತ್ತಿ
ಹಾರೈಸಿದೆನ್ನೈ ಜ್ಯೋತಿಯ ಉದಯಕೆ.
ಆದರದೇನೀ ಮಾನವ ಹೃದಯಕೆ
ಮೈದೋರಿತೆ ತೃಪ್ತಿ ?
ಪ್ರಕೃತಿಯ ಕೆನ್ನೆಗೆ ಸುರಿಸಿದ ಕಣ್ಬನಿ
ಅಯ್ಯೋ ಬರಿವ್ಯರ್ಥ.
ಮಾತಿನ ಪ್ರಶ್ನೆಗೆ ಮೌನವೆ ಉತ್ತರ ;
ನಿಃಶಬ್ದಕೆ ಹೇಳೇನರ್ಥ ?
ಬಲತಾಯಿಯೊ ಬರಿ ದಾದಿಯೊ ಆಕೆ ;
ನನ್ನಾತ್ಮದ ತೃಷೆಗವಳೆದೆ ಸಾಕೆ ?
ನೀಲಾಕಾಶದ ಸೆರಗನು ಕೆಲಕೆ
ತಾಯಾದರೆ ನೀನೋಸರಿಸು,
ಓ ಪ್ರಕೃತಿ,
ಅಮೃತದ ಬೆಳ್ದೊರೆಯಂ ಸುರಿಸು.

ಇಲ್ಲಾ,
ಎಂದೆಂದೂ ಇಲ್ಲೊಮ್ಮೆಯು ಇಲ್ಲ;
ಆವಳಿದೆ ಹಾಲಿಂದೆನ್ನೆದೆಯುರಿತೃಷೆ
ಎಂದೂ ಆರಿಲ್ಲ!

೭

ವಿದ್ಯುದ್ವೇಗದಿ
ದೃಢಹಠರಾಗದಿ
ಹತ್ತಿರೆ ಹತ್ತಿರೆ ಬಂದುದು ತಾಗಿ
ಕ್ರೂರ ಕಿರಾತನ
ಕರುಣ ಸುದರ್ಶನ;
ಅದೊ ಕೇಳದೊ ಘೂರ್ಣಿಸುತಿದೆ ಕೂಗಿ:
“ಎಲವೋ ನನಗರ್ಪಿಸದಾ ಶಾಂತಿ
ನಿನಗೈತರ್ಪುದೆ? ಬಿಡೆಲಾ ಭ್ರಾಂತಿ!”

೮

ಶರಣಾದೆನಿದೋ ರಿಕ್ತಾನಾಥಂ;
ಕೊಂದರೆ ಕೊಲಲಿ ಕಠೋರ ಕಿರಾತಂ.
ಹೊತ್ತಾ ಭಾರಕೆ ಕತ್ತರಿಯಾಗಿ
ಮೋಣೆನ್ನಾಸೆಗೆ ಹತ್ತರಿಯಾಗಿ
ನೀನೆನ್ನಂ ಸುಲಿದೆ,
ಸೋಲಿಸಿದೆ;
ನಾನಿದೊ ಶರಣಾದೆ
ಪದತಲದೆ.
ನಿದ್ದೆಯಿನೆದ್ದೆನೆ? ಕನಸಂ ಕಂಡೆನೆ?
ಮಲಗಿದ್ದಾಗಳೆ ಬತ್ತಲೆಗೊಂಡೆನೆ?
ಯೌವನ ಶಕ್ತಿಯ ರಾಗೋನ್ಮಾದದಿ
ಮೋಣವಿವೇಕದ ಭೋಗಾಮೋದದಿ
ಬಾಳ್ಗುಡಿ ತಳಹದಿಯನೆ ಕಿತ್ತು

ಕೊಡಹಿದೆ; ಮೈಮೇಲೆಯೆ ಬಿತ್ತು
ಆ ಗೋಪುರ ಭಾರಂ.
ಮಮ ತಾರುಣ್ಯದ ಭದ್ರಾಕಾರಂ
ಛಿದ್ರಂ ಬಿದ್ದಿದೆ ಪಾಳಿನ ಮಧ್ಯೆ,
ಬಾಡೆಲ್ಪಿನ ನುರಿಮುರಿ ಮುದ್ದೆ:
ಬಾಳಿನ ಹೂವನೆ ನುಂಗಿತೆ ನಿದ್ದೆ?
ಬಿರಿದುದೆ ಆ ಸವಿ ಹೊಂಗನಸು?
ಪೃಥ್ವೀಗೋಲವ ಗೋಲಿಯ ಮಾಡಿ
ಸೂರ್‍ಯ ಬಿಂಬವನೆ ಗುರಿನೋಡಿ
ಕಲ್ಪನೆಯೆಸೆದಾ ಕ್ರೀಡಾ ವಿದ್ಯೆ,
ಓಕುಳಿಯಾಟದ ರಸಮನಸು?
ಗೋಳಿಡಿದೀ ಗೋಳದ ಭಾರಕ್ಕೆ
ಸಾಲ್ವುದೆ ಆ ಮಿಥ್ಯೆಯ ರೆಕ್ಕೆ?
ಕೆಡೆದುರುಳಿತೊ ಪಾತಾಳಕ್ಕೆ
ಆ ಸ್ವಪ್ನ ಪ್ರಾಣಿ!
ಕೃಪಣವೆ ತವಕೃಪೆ, ಕೃಪಾಣಪಾಣಿ?
ನಿನಗಲ್ಲದ ಸೇವೆ
ನಿನಗೆದೆ ನೋವೆ?
ಪ್ರಾಣದ ಪೊನ್ನಂ ನಿನ್ನುರಿಕಲ್ಪಿ
ಕರಗಿಸಿದಲ್ಲದೆ
ಕರುವಿಡೆ ಸಲ್ಲದೆ,
ಓ ಮಾಯಾ ಶಿಲ್ಪಿ?
ಕಿಸಲಯ ಚಾಂಚಲ್ಯ.
ಹುಡಿಯಲಿ ಲಯವಾಯ್ತೆನ್ನಾ ಬಾಲ್ಯ;
ಮದಗಜವದು ನುಗ್ಗಿ
ಸಿಡಿದುದು ಯೌವನದೋಕುಳಿ ಬುಗ್ಗೆ;
ಕಣ್ಣೀರಿನ ಕೊಚ್ಚೆ
ಜೀವನ ಪಂಕಜವನು ಮುಚ್ಚೆ
ಬಾಳ್ಗೇಡಿಗೆ ಗತಿ ಮುಂದಿಹುದೆ?
ತಿರುಳಿದೆ ಕಹಿಯಾದರೆ, ಆ ಸಿಪ್ಪೆ?

ಈ ಲೋಕವೆ ಸಪ್ಪೆ ;
ಆ ಲೋಕದ ಬದುಕೇನುಪ್ಪಹುದೆ ?—
ಇಂತಾಂ ಚಿಂತಿಸುತಿದ್ದಂತೆ,
ಕಗ್ಗತ್ತಲೆಗುರಿಬಿದ್ದಂತೆ,
ಬೊಮ್ಮದ ಗುಮ್ಮಟದಾ ಕಡೆಯಿಂದ
ನೀಲ ಅನಂತದ ಕೊತ್ತಳದಿಂದ
ಸಂಶಯವನು ಸೀಳಿ
ಸದ್ದೆಲ್ಲಂ ಮೀರಿ
ಅದೊ ಬಂದುದು ಶಂಖಧ್ವನಿ ಕೇಳಿ,
ಶ್ರದ್ಧೆಯ ತುತ್ತೂರಿ!
ತಿರುಗಿದೆ, ನೋಡಿದೆ, ತೆಕ್ಕನೆ ಕಂಡೆ
ತೂರ್ಯಧ್ವನಿಗೈದಾತನನು,
ಕರುಣಾಕೇತುವನು ;
ಜ್ಯೋತಿರ್ಜ್ವಾಲಾ ಕೇತನ ಮಾಲಾ
ದೋಲಿತ ದಿವ್ಯ ವರೂಥನನು,
ದೈತ್ಯ ಕಿರಾತನನು ;
ಕೇಸುರಿ ಕೇಸರಿಪೀಠನನು,
ವಿದ್ಯುತ್ಖಚಿತ ಕಿರೀಟನನು.
ತಿವಿಯಿತು ತಿಮಿರಕೆ ಆ ಕ್ಷಣಕಾಂತಿ ;
ಕ್ಷಣಮಾತ್ರಂ ತೊಲಗಿತು ಕಣ್ಭ್ರಾಂತಿ ;
ಕ್ಷಣದರ್ಶನವಿತ್ತಿತು ಶಾಂತಿ :
ಜೀವನ ಕರ್ಮವೊ ಜೀವಿಯ ಧರ್ಮವೊ
ಪೈರಾವುದೆ ಕೊಯ್ಲಾಗಲಿ ನಿನಗೆ,
ಮಸಣದ ಬಿತ್ತನೆಗೆ
ನೋವಿನ ಗೊಬ್ಬರ, ಸಾವಿನ ಬಿತ್ತು,
ಹೊಲವುಳುವೊಕ್ಕಲಿಗನೊ ಮೃತ್ಯು!

೯

ಆ ಅನಿವಾರ್ಯಂ
ಮೃಗಯಾತೂರ್ಯಂ

ಘೋರಿಡುತಿದೆ ಸವು ಸಾಗರ ಘೋಷಂ :
"ಹೊರಿ ಭಾರಾಯ್ತೆ ?
ತಿರೆ ಚೂರಾಯ್ತೆ ?
ಬತ್ತಿತೆ ನಿನ್ನಾ ವೇಗಾವೇಶಂ ?
ಓಡಿದರೆನ್ನಿಂದೋಟವೆ ನಾಶಂ !
ನನ್ನಿಂದೋಡುವಗೆಲ್ಲಿಯೊ ದೇಶಂ ?
ಹೇಡಿಯೆ, ಮತಿಗೇಡಿಯೆ, ಒಡಪಾಯಿ,
ಛೀಃ ಕ್ಷುದ್ರಪ್ರಾಣಿ,
ಗತಿಯೇನೈ ಹಗೆಯಾದರೆ ತಾಯಿ ?"
ಜೇಗೈದುದು ಆ ಪಿನಾಕವಾಣಿ :
"ಭೀತಿಯಿನೋಡುವನರ್ಹನೆ ಪ್ರೀತಿಗೆ ?
ಒಲಿಯುವರಾರೈ ಭೀರು ಕುನೀತಿಗೆ
ನಾನಲ್ಲದೆ ಬೇರೆ ?
ನನ್ನಿಂದಲ್ಪತೆಗಾಯ್ತು ಮಹತ್ವಂ
ನಿನ್ನೊಳು ವೈದೋರೆ.
ನಿನಗೆಲ್ಲಿಯೊ ಆ ಸುಕೃತದ ಸತ್ವಂ ?
ಕರ್ಮಕೆ ತಕ್ಕಂತೆಯೆ ಪುಣ್ಯಂ ;
ನೀನೆತ್ತಣ ಧನ್ಯಂ ? —
ನಾನಲ್ಲದೆ ನಿನಗಾವುದೊ ದಿಕ್ಕು ?
ನನಗಲ್ಲವೆ ನಿನ್ನಾತ್ಮದ ಹಕ್ಕು ?
ಬಿಡೊ ಸಾಲ್ಗುಂ ಸೊಕ್ಕು !
ಸುಲಿದೆನು ನಿನ್ನಾ ಬಾಳಿನ ಸೊತ್ತಂ ;
ವಂಚಿಸಲೆಂದಲ್ಲ.
ಬುತ್ತಿಯ ಕಟ್ಟಿಹೆನೆನ್ನೊಳೆ ಮತ್ತಂ
ಸಾಧಿಸಿ ಪಡೆಯಲಿ ಎಂದದನೆಲ್ಲ.
ಹೋಯ್ತೆಂದಳುವೆಯೊ ? ಬಿಡು ಶಿಶುಬುದ್ಧಿ :
ಕೊನೆಯೊಳಗಾಗುವುದನಿತೂ ಸಿದ್ಧಿ ;
ಬಾ ಆ ಕೊನೆಗೆ.
ಮೇಲೇಳಿಗೊ ಕೈ ಹಿಡಿ, ನಡೆ ಮನೆಗೆ !"

## ೧೦

ಇರಿಯಿತ್ತೈದೆಯಂ ದಯಾತ್ರಿಶೂಲಂ ;
ಬಿರಿಯಿತ್ತೊರ್ಮೆಯೆ ಮಾಯಾಮೂಲಂ .
ಚಿಮ್ಮಿತ್ತಾರಕ್ತಾಮೃತ ನಾಕಂ ;
ತೇಲಿತು ತೀರ್ಥದಿ ಲೋಕಂ, ಶೋಕಂ !—
"ನೀನಾಶೀರ್ವಾದಕೆ ನೀಡಿದ ಬಾಹು
ಮಾಡಿದ ಛಾಯೆಯೆ ಆ ರಾಹು ?
ಅಥವಾ ನಿನ್ನಯ ಕರುಣೆಯ ಲೀಲೆ
ಆ ಮೃಗಯಾವೇಶದ ಕೇತು ?
ದಿವದಿಂ ನರಕಕೆ ಮರ್ತ್ಯದ ಮೇಲೆ
ತವ ದಯೆ ಬೀಸಿದ ವಾತ್ಸಲ್ಯದ ಸೇತು ?"
ಒಲಿದಾಲಿಂಗಿಸಿ ಬಳಿ ನಿಂದು
ಸಂತೈಸಿತು ಕೃಪೆ ಇಂತೆಂದು :
"ಅಹುದೈ ಕಂದ,
ನಾ ನೀ ಅರಸುವ ಆನಂದ !
ಸಂಕಟವಲ್ಲದೆ ಸುಖವೆಲ್ಲಿಂದ
ನೀನಕಟಾ
ಓಡಿದರೆನ್ನಿಂದ ?"



# ಸದಾ

ನಿನ್ನ ಆಶೀರ್ವಾದ ಪರಿವೇಷ ಮುತ್ತಿರಲಿ
ನನ್ನನು ಸದಾ;
ನನ್ನ ಭಕ್ತಿಯ ಬಳ್ಳಿ ಮಲರಾಂತು ಸುತ್ತಿರಲಿ
ನಿನ್ನನು ಸದಾ.
ನನ್ನ ಹೃದಯದ ತುಂಬಿ ನಿನ್ನಡಿಯ ಮಧುರತೆಗೆ
ಹಾರಲಿ ಸದಾ;
ನನ್ನ ಸಾಂತತೆ ನಿನ್ನನಂತತೆಯನೆಡೆಬಿಡದೆ
ಹೀರಲಿ ಸದಾ.
ನನ್ನ ವ್ಯಕ್ತಿತೆ ನಿನ್ನ ವ್ಯಕ್ತಿತ್ವಸಾಗರದಿ
ತೇಲಲಿ ಸದಾ;
ನನ್ನ ಕರ್ಮಗಳೆಲ್ಲ ನಿನ್ನ ಋತ ಮರ್ತ್ರವನೆ
ಹೋಲಲಿ ಸದಾ.
ನನ್ನ ನ್ಯೂನತೆಯೆಲ್ಲ ನಿನ್ನ ಪೂರ್ಣತೆಗಾಗಿ
ನೋಯಲಿ ಸದಾ;
ನನ್ನ ನಶ್ವರವೆಲ್ಲ ನಿನ್ನ ನಿತ್ಯತೆಗಾಗಿ
ಸಾಯಲಿ ಸದಾ!

# ಮುಕ್ತ ಮಹಾಪುರುಷನಿಗೆ

**ಶ್ರೀರಾಮಕೃಷ್ಣ ಪರಮಹಂಸರ ಅಂತರಂಗ ಶಿಷ್ಯರೂ ದೀಕ್ಷಾಗುರುಗಳೂ ಆದ ಶ್ರೀಮತ್ ಸ್ವಾಮಿ ಶಿವಾನಂದರ ಮಹಾಸಮಾಧಿಯ ವಾರ್ತೆಯನ್ನು ಕೇಳಿ ಬರೆದದ್ದು.**

ಮತ್ತೊಂದು ನಕ್ಷತ್ರ ಹುಡಿಯಾಯ್ತು, ಭಾರತ ವಿ-
ಯತ್ತಳದಿ! ಜೀವನ ಮಲಯವನದಿ ಕಂಪು ತಂ-
ಪಿತ್ತ ಚಂದನದ ತರು ಮಿತ್ತುಗಿಚ್ಚಿಗೆ ಸಿಲುಕಿ
ಬೆಂದುರಿದು ಭಸ್ಮವಾಯ್ತು!
ಬಿತ್ತರದ ನವಯುಗದ ಧರ್ಮದ ಹಿಮಾಚಲದ
ನೆತ್ತಿಯಿಂದುದ್ಭವಿಸಿದಾ ಸ್ರೋತಗಳಲಿಂದು
ಮತ್ತೊಂದು ಹಗ್ಗಡಲಿಗಿಳಿದು ಕಣ್ಮರೆಯಾಯ್ತು;
ಬಿಂದು ತಾಂ ಸಿಂಧುವಾಯ್ತು!

ಚೈತ್ರದಲಿ ಚಿಗುರಿದೆಲೆ ಮಾಗಿಯಲಿ ಹಣ್ಣಾಗಿ
ಧಾತ್ರಿಗುರುಳುವ ತೆರದಿ, ಹೇ ಗುರುವೆ, ಮಾಯೆಯೀ
ಕ್ಷೇತ್ರದಿಂದುರುಳಿ ಕಾಲಾತೀತನಾಗಿ ನೀಂ
ಮರಣದಲಿ ಮುಕ್ತನಾದೆ.
ಹಕ್ಕಿಮರಿ ಚೆಲುವಾದ ಮೊಟ್ಟೆವನೆಯಂ ತನ್ನ
ಕೊಕ್ಕಿನಿಂ ಬಿರಿಯುತಾನಂದದಿಂ ಬಾಂದಳಕೆ
ರೆಕ್ಕೆಗೆದರ್ವಂತೆ ನೀಂ ದೇಹನೀಡವನುಳಿದು
ಪರಮಾತ್ಮಲೀನನಾದೆ.

ಬದುಕಿ ದೂರದೊಳಿದ್ದೆ, ಸತ್ತು ಹತ್ತಿರವಾದೆ;
ಎದೆಯ ಬರುಗನಸಿಂದು ಅನುಭವಾಮೃತಮಾಯ್ತು.
ಇದುವರೆಗಿನಣುರೂಪಮಿಂದು ತಾಂ ವಿಭುವಾಯ್ತು,
ಋತ ಶಿವಾನಂದಮಾಗಿ.
ನಂಬಿಹೆನು ಆತ್ಮವಚ್ಯುತವೆಂದು; ಅದರಿಂದೆ
ಕಂಬನಿಯ ಕರೆಯುವುದೆ ನಾಸ್ತಿಕತೆ! ನಿನ್ನಾತ್ಮ
ತುಂಬಿರುವುದಾಬ್ರಹ್ಮಸ್ತಂಬ ಪರ್ಯಂತಮುಂ
ಸರ್ವಸ್ವತಂತ್ರಮಾಗಿ.

ದ್ವಂದ್ವಗಳ ಗೊಂದಣದಿ ಸಂಚರಿಸುವಲ್ಪಮತಿ
ಬಂಧನಾತೀತವಹ ಭವದಾಚೆಯಿರುವ ನಿ-
ರ್ದ್ವಂದ್ವದದ್ವೈತದಾ ಸಚ್ಚಿದಾನಂದಮಂ
ಇಲ್ಲಿ ತಾಂ ತಿಳಿವುದೆಂತು ?
ಹುಟ್ಟದಿದೆ. ಸಾಯದಿದೆ. ಮುಟ್ಟಿಯೂ ಮುಟ್ಟದಿದೆ.
ಗುಟ್ಟು ಗುಟ್ಟೆಂಬ ನುಡಿ ಬರಿ ಮಿದುಳುಮಲ್ಲರಾ
ಪಟ್ಟಲ್ಲದಿನ್ನೇನು ? ಏನು ಏನಾಗಿಹುದೊ
ಅಲ್ಲಿ ? ನಾವರಿವುದೆಂತು ?

ಜೀವಶಕ್ತಿಯು ತನ್ನ ಯಾತ್ರೆಯಲ್ಲಿತ್ತೀಚೆ-
ಗೀ ವಿಚಾರದ ಬುದ್ಧಿಯನ್ನೆಮಗೆ ನೀಡಿಹುದು
ಜೀವಪ್ರವಾಹ ಪೂರ್ಣವನರಿಯಲೆಂದಲ್ತು,
ಜೀವನದ ಉಪಯೋಗಕೆ.
ಖಂಡನಾಸಾಧ್ಯವಹ ಕಾಲಪ್ರವಾಹಮಂ
ಖಂಡಿಸುತೆ, ಚಲನೆಯಂ ಕೊಂದು ನಿಶ್ಚಲಗೈದು,
ಕಂಡೆನೆನೆ ಬುದ್ಧಿ, ಸತ್ಯದ ಶವವನುಂಡಂತೆ !
ಮಾರ್ಗಮಲ್ತದು ಯೋಗಕೆ.

ಕಾರ್ಯ ಕಾರಣಯುಕ್ತಿಯಿಂದಲ್ತು ಆತ್ಮವಂ-
ತರ್ಯಾಮಿಯವಿನಾಶಿಯಮೃತವೆಂದರಿತಿಹುದು :
ಸೂರ್ಯ ರಶ್ಮಿಗೆ ತರ್ಕಮಲ್ತು, ಕಾಣುವ ಕಣ್ಣೆ
ಖಂಡನಾತೀತ ಸಾಕ್ಷಿ.
ಬುದ್ಧಿಯ ಸಹಾಯದಿಂ ತರ್ಕದಿಂ ಯುಕ್ತಿ ತಾಂ
ಸಿದ್ಧಾಂತಗೈದುದಂ ಮುರಿವುದೈ ಪ್ರತಿಯುಕ್ತಿ.
ಸಿದ್ಧಿಯಾಧಾರದಪರೋಕ್ಷಾನುಭೂತಿಯದು
ಅನಿಮೇಷ ಯೌಗಿಕಾಕ್ಷಿ.

ಕೊನೆಗೊಳ್ಳುವುದು ಯುಕ್ತಿಯಜ್ಞೇಯವಾದದಲಿ :
ಮನವದೆನ್ನೊಂದಂಶವದು ಪೂರ್ಣತೆಯನೆಂತು
ಮನಗಾಂಬುದದರಿಂದೆ ಮತಿಗಲ್ತು ಸಾಧನೆಗೆ
ಸಂವೇದ್ಯವಾತ್ಮಸಿದ್ಧಿ.

ತಿಳಿದವಗೆ ತಿಳಿಯದದು, ತಿಳಿಯದಗೆ ತಿಳಿದಿಹುದು,
ತಿಳಿದರೂ ಚೆನ್ನಾಗಿ ತಿಳಿದಿಲ್ಲವಾದರೂ
ತಿಳಿದಿಲ್ಲವೆಂದಲ್ಲ— ಎಂದುಪನಿಷತ್ತಿನಲಿ
ಸೋಲಸೊಪ್ಪಿಹುದು ಬುದ್ಧಿ !

ಎರಡೆನಲು ಮತಿಯೆದ್ದು 'ಸುಳ್ಳು' ಎಂದೊರಲುವುದು ;
ಇರುವುದೊಂದೆನೆ 'ಟೊಳ್ಳು' ಎಂದೆದೆಯು ನರಳುವುದು.
ಅರಿವು ಇರವುಗಳೆರಡು ದಡಗಳಂ ಕೊಚ್ಚುತ್ತೆ
ಜೀವನದಿ ಹರಿಯುತಿಹುದು.
ಏಕವಾಗಿರೆ ನನ್ನಿಯದು ನನ್ನ ಮತಿಯರಿತ
ಏಕತೆಯುಮಲ್ಲ ; ಬಹುವಾಗಿರಲು ನಾನರಿತ
'ನೇಕತೆಯುಮಲ್ಲ ; ತರ್ಕವ ಮೀರಿದಾ ತತ್ತ್ವ
ತಾನೆ ತಾನಾಗಿ 'ಇಹುದು' !

'ತತ್ತ್ವಮಸಿ !' 'ತತ್ತ್ವಮಸಿ' ನೀನಿಂದು, ಓ ಗುರುವೆ !
ತತ್ತ್ವಮೆಂತೋ ಏನೊ ? ಅಂತು ನೀಂ 'ತತ್ತ್ವಮಸಿ !'
'ತತ್ತ್ವಮಸಿ' ನಾನಾಗುವನ್ನೆಗಂ ನಿನ್ನಡಿಗೆ
'ತತ್ತ್ವಮಸಿ' ಎಂದೆರಗುವೆ.
ಭೂಮಿಯಲಿ ಚಂದ್ರನಲಿ ಸೂರ್ಯತಾರೆಗಳಲ್ಲಿ
ವ್ಯೋಮದಲಿ ಕಾಲದೇಶಂಗಳಲಿ ಸರ್ವದಲಿ
ಭೂಮಾತ್ಮ ನೀನಾಗಿ ಬ್ರಹ್ಮದೊಳಗೊಂದಾಗಿ
ದಿವ್ಯಕೃಪೆ ಬೀರುತಿರುವೆ !

ದೇವರವತಾರವೆತ್ತುವನೆಂದು ಕೆಲಮಂದಿ ;
ಭಾವಕ್ಕೆ ನಿಲುಕದ ನಿರಾಕಾರನವನೆಂತು
ಸಾವ ಹುಟ್ಟುವ ಭುವನ ಸಂಸಾರಮಾಯೆಯಲಿ
ಬೀಳುವನು ?—ಎಂದು ಕೆಲರು.
ಸರ್ವಶಕ್ತನು ಅವನು ಎಂದೆನಲು, ರೂಪ ತಳೆ-
ದುರ್ವಿಗೈತರುವುದೊಂದೇನು ವೈಚಿತ್ರ್ಯವೇಂ ?
ಸರ್ವಶಕ್ತಿಗೆ ಹೊರತೆ ರೂಪಧಾರಣ ಶಕ್ತಿ ?
ಕುಂದೆಲ್ಲಿ ?—ಎಂದಿತರರು.

## ಮುಕ್ತ ಮಹಾಪುರುಷನಿಗೆ

ಎಂತಾದರಿರಲಿ ದಿಟ ! ಮಾನವರು ನಮಗೆ ನ-
ಮ್ಮಂತೆ ಹರಿ : ದೇವತ್ವವಿಹ ನರಂ ಪ್ರತಿಮೆ ತಾಂ
ಚಿಂತೆಯಂ ಮೀರಿಹ ನಿರಾಕೃತಿಗೆ ! ಇನ್ನೆಲ್ಲಿ
ತೋರೀಶ್ವರಾದರ್ಶವು ?
ಅದರಿಂದ ಮಾನವನು ಮಾನವನ ಪೂಜೆಯಲಿ
ಮೊದಲಿಂದೆ ತೊಡಗಿಹನು. ತಪ್ಪಿಲ್ಲವದರೊಳಗೆ.
ಅದು ಪಥವೆ ಹೊರತು ಗತಿಯಲ್ಲ. ಯುಕ್ತಿಯೊಳೇನು ?
ಭಕ್ತಿಯಲ್ಲಿದೆ ಹರ್ಷವು.

ಮೀರ ಬಲ್ಲವರಾರು ಮಾಯೆ ಬೀಸಿಹ ಬಲೆಯ ?
ಮೀರಿದಾತನೆ ನಮಗೆ ದೇವಗುರುವಾದಪನು !
ಮೀರದಿಹ ತಾರ್ಕಿಕನೆ, ನರಪೂಜೆಯೇನಯ್ಯ
ದೇವತ್ವದಾರಾಧನೆ ?
'ಹುಟ್ಟು, ಹುಟ್ಟಿಸು, ಸಾಯು !' ಪ್ರಕೃತಿಯಾ ಆಣತಿಗೆ
ಸೃಷ್ಟಿ ತಲೆಬಾಗುತಿದೆ ಕಾಮಕ್ಕೆ ಶರಣಾಗಿ.
ಕಟ್ಟಿ ಸೊಂಟವನದನು ಮೂದಲಿಸಿ ಗೆಲ್ಲುವುದೆ
ಭೀಷಣ ತಪಸ್ಸಾಧನೆ !

ಮುಕ್ತಾತ್ಮ, ಅಂತಹ ತಪಶ್ಶಕ್ತಿ ನಿನ್ನದೈ !
ಯುಕ್ತಿಯೆಂಬುದು ಬರಿಯ ಪಾಕಶಾಸ್ತ್ರದ ಶಿಕ್ಷೆ ;
ಭಕ್ತಿಯಾದರೂ ಭಕ್ಷ್ಯ ! ಶಿಕ್ಷಣಂ ಭಕ್ಷಣಮೆ ?
ಅಧ್ಯಯನ ಸಿದ್ಧಿಯಲ್ಲ ?
ಓದಿದರೆ ಸಾಲದೈ, ಎಲವೊ ಮಾತಿನಮಲ್ಲ,
ಸಾಧನಂಗೈಯ ಬೇಕಯ್ಯ ! ಹೆಂಡದ ಹೆಸರು
ಮಾದಕವೆ ನೂರಾರು ಮಡಿ ಹೇಳ್ದಡಂ ? ಅಂತೆ
ಬರಿಯೋದು ಸಿದ್ಧಿಯಲ್ಲ !

ಧರ್ಮ ಪ್ರಪಂಚದಲಿ ನಾವು ಶಿಶುಗಳು ಕಣಾ !
ಮರ್ಮವನ್ನರಿತ ಗುರುಗಳಿಗೆ ಹಸುಳೆಗಳಯ್ಯ !
ಚರ್ಮಕಾರಗೆ ಸತ್ತ ಪ್ರಾಣಿಯಾತ್ಮದ ಗುಟ್ಟು
ತಿಳಿಯುವುದೆ ಹದಹಾಕಲು ?

ಈ ಜಗತ್ತ್ರೊಂದದ್ಭುತ ರಹಸ್ಯವೆಂತೆನಲು
ಈಜುವವನಿಗೆ ಹೊಳೆಯ ತಳದರಿವಿನಂದದಲಿ!
ಈಜಯ್ಯ ಸದ್ಯಕ್ಕೆ. ಬಲ್ಲವರನೋಲೈಸಿ
ತಿಳಿ ಕಾಲುಕ್ಕೆ ಹಾಕಲು.

ಹಾಗಾದರಜ್ಞಾನವೇ ನಮ್ಮ ಸುಜ್ಞಾನ-
ವಾಗುವುದೆ? ಕಾವ್ಯ ಕಲೆ ವಿಜ್ಞಾನತತ್ತ್ವಗಳು
ಭೋಗಗಳೆ? ವ್ಯರ್ಥ ಮಿಥ್ಯೆಗಳೇಸು? ಅಲ್ತಲ್ತು;
ಎಲ್ಲ ಸೋಪಾನಶ್ರೇಣಿ!
ಬಂದಿರುವುವೆಲ್ಲ ಕದಿರುಗಳೊಂದೆ ರವಿಯಿಂದೆ;
ಮಂದ್ಯವೊಂದೊಂದು ಛವಿ! ಎದೆಯ ಗವಿಗೊಮ್ಮೊಮ್ಮೆ
ಸುಂದರ ಮರೀಚಿಗಳಲೊಂದು ಬರೆ 'ದರ್ಶನ'ಕೆ
ನಲಿಯುವುದು ಕವಿಯ ವಾಣಿ!

ಎಂತೊ ಏನೋ ಅಂತು ಪರಿಹಾರವಾಗುವುವು
ಚಿಂತೆ ತಂದೊಡ್ಡಿರುವ ಅಗಣಿತ ಸಮಸ್ಯೆಗಳು
ಅಂತವಾದಿಗಳಿಲ್ಲದತಿಮೃತ್ಯು ಲೋಕದಲಿ
ಕಲ್ಪನಾತೀತವಾಗಿ!
ಅನ್ನೆಗಂ ತೊಡಗುವೆನು ಧರ್ಮದಲಿ ಕರ್ಮದಲಿ
ನನ್ನಿಯೊಲ್ಮೆಗಳಲ್ಲಿ ಪುಣ್ಯಸೌಂದರ್ಯದಲಿ
ನನ್ನಂತೆ ಕಲೆಯನು ಉಪಾಸಿಸುವರೊಡಗೂಡಿ
ಕಲ್ಪನಾಧೀನನಾಗಿ!

ನೀಡಯ್ಯ, ಓ ಗುರುವೆ, ಋಜು ದರ್ಶನವನೆನಗೆ;
ಮೂಢತೆಯ ಮುರಿವ ಸದ್ಬುದ್ಧಿಯಂ ಧೈರ್ಯಮಂ;
ಗೂಢ ಚೈತನ್ಯಮಂ ಸವಿಯೆ ರಸದೃಷ್ಟಿಯಂ;
ಯುಕ್ತಿಯಂ ವ್ಯವಹಾರಕೆ.
ಹೃದಯ ದೌರ್ಬಲ್ಯಮಂ ಪರಿಹರಿಸಿ, ಯೋಗಮಂ
ಮಧುರ ಸಾಧನೆಗೈವ ಧೀರ ವೈರಾಗ್ಯಮಂ,
ಸುಧೆವೆರಸಿ ನೀಡಯ್ಯ ಮೃತ್ಯುಮಾಧುರ್ಯಮಂ,
ಮುಕ್ತಿಯಂ ಪರಮಾರ್ಥಕೆ!

ಏಳೇಳು, ದಿನಕರನೆ, ಪೂರ್ವದಿಗ್ದೀರ್ಘಿಕಾ
ನೀಲ ಫಾಲದಿ ದಿವಾಕೋಕನದವರಳ್ವಂತೆ,
ಕಾಳರಾತ್ರಿಗಳುರಿದು ಚಿರದಿನಂ ಬರುವಂತೆ,
ಸೌಂದರ್ಯವುಕ್ಕುವಂತೆ,
ವಿಕಸಿತ ವಸಂತದಲಿ ವನರಾಜಿ ನಲಿವಂತೆ,
ಶುಕಪಿಕ ವಿಹಂಗಮುಗಳುಲಿಹಕ್ಕೆ ಕಡಲು ತಿರೆ
ತಕತೈಯ್ಯ ಕುಣಿವಂತೆ, ಜೀವನ ರಥೋತ್ಸವಂ
ಪೆರ್ಮೆಯಿಂ ಪೆರ್ಚುವಂತೆ!



# ಬಲ್ಲವರದಾರು !

ಏನಿಲ್ಲ ! ಏನಿಲ್ಲವೆಂಬುದೂ ಅಲ್ಲಿಲ್ಲ !
ಏನದೆಂಬುದನರಿವರಾರೊಬ್ಬರೂ ಇಲ್ಲ !
ಕರಿದಿಲ್ಲ ; ಬಿಳಿದಿಲ್ಲ ; ದಿನವಿಲ್ಲ ; ನಿಶೆಯಿಲ್ಲ ;
ಅರಿವಿಲ್ಲ, ಮನವಿಲ್ಲ ; ಅಳಿವಿಲ್ಲ, ಉಳಿವಿಲ್ಲ ;
ಶೂನ್ಯಮಲ್ಲವು ! ಸರ್ವವೂ 'ನೇತಿ' 'ನೇತಿ' !
ಕಾಲದೇಶಗಳಿಲ್ಲ ! ಸಾವುಬಾಳುಗಳಿಲ್ಲ !
ನಾನಿಲ್ಲ ; ನೀನಿಲ್ಲ ; ಸರ್ವವೂ ಮೌನ !
ತಿಮಿರ ಬೆಳಕಿನೊಳಡಗಿ, ಬೆಳಕು ತಿಮಿರದೊಳವಿತು,
ಭಾವ ಶೂನ್ಯವ ಸೇರಿದುದು ಐಕ್ಯಮಾಗಿ !
ರವಿಯಿಲ್ಲ, ಶಶಿಯಿಲ್ಲ ; ನಭವಿಲ್ಲ, ಧರೆಯಿಲ್ಲ ;
ರಂಜಿಸುವ ಉಡುಗಣದ ಸೌಂದರ್ಯವಿಲ್ಲ !
ತುದಿಯಿಲ್ಲ, ಮೊದಲಿಲ್ಲ ; ಒಂದಿಲ್ಲ ಎರಡಿಲ್ಲ ;
ಏನು ಏನಾಗಿರ್ದುದೋ ಬಲ್ಲವರದಾರು ?
ಭಾವದೊಳಭಾವವೋ ? ಶೂನ್ಯದೊಳಶೂನ್ಯವೋ ?
ಅರಿವಿನಾಚೆಯ ತೀರ ಬರಿಮೌನ, ಮೌನ !
ಜ್ಞಾನ ತಾನಲ್ಲಿಲ್ಲ ; ಜ್ಞೇಯಮದುಮಿಲ್ಲ ;
ಜ್ಞಾನ ಜ್ಞೇಯಗಳೆಲ್ಲ ಜ್ಞಾತನೊಳು ಸೇರೆ
ಏನು ಏನಾಗಿರ್ದುದೋ ಬಲ್ಲವರದಾರು ?



# ರೋರಿಕ್ ಚಿತ್ರಶಾಲಾ ಸ್ಮೃತಿ

(ಬೆಂಗಳೂರಿನಲ್ಲಿ ವಿಶ್ವೇಶ್ವರಪುರದಲ್ಲಿ ಮನೆಯ ತಾರಸಿಯ ಮೇಲೆ ಕುಳಿತು ಭಾದ್ರಪದ ಮಾಸದ ದಿಗಂತಾಕಾಶದಲ್ಲಿ ಸಂಧ್ಯಾಶಿಲ್ಪಿ ರಚಿಸುತ್ತಿದ್ದ ಮೇಘಕಾವ್ಯಗಳನ್ನು ಅವಲೋಕಿಸುತ್ತಾ ಒಂದು ವರುಷದ ಹಿಂದೆ ಮೈಸೂರಿನಲ್ಲಿ, ದಸರಾ ಪ್ರದರ್ಶನದಲ್ಲಿ, ಶ್ರೀಯುತ ಜೆ. ಎಚ್. ಕಸಿನ್ಸ್ ಅವರು ಅಣಿಗೈದಿದ್ದ ರೋರಿಕ್ ಚಿತ್ರಶಾಲೆಯಲ್ಲಿ ನೋಡಿ ಸವಿದಿದ್ದ ನಿಕೊಲಾಸ್ ರೋರಿಕ್ ಎಂಬ ಹಿಮಾಲಯವಾಸಿ ರಷ್ಯಾ ದೇಶದ ವರ್ಣಶಿಲ್ಪಿಯ ಭವ್ಯಚಿತ್ರ ಕಲಾಕೃತಿಗಳ ನೆನಪು ಮಲರ್ದು ರಚಿಸಿದುದು.)

ರೋರಿಕ್, ಓ ರೋರಿಕ್, ವರುಷವೊಂದರ ಹಿಂದೆ,
ಮೈಸೂರಿನಲಿ, ನಿನ್ನ ದಿವ್ಯಕಲೆಯನು ಕಂಡೆ:
ಕಂಡುದೆ ತಡಂ ಸ್ಫುರಿಸಿತೆನ್ನೆದೆಗೆ ದಿವ್ಯಾಗ್ನಿ,
ಪೂರ್ವಪರಿಚಿತ ಭವ್ಯಮಂ ತೆಕ್ಕನೆಯೆ ಮತ್ತೆ
ಸಂಧಿಸುತದರ ಗುರುತು ಹಿಡಿದಂತೆ! ನಿಚ್ಚಮುಂ
ಯಾತ್ರೆಗೈದೆನ್ ಚಿತ್ರಶಾಲಾ ಪ್ರದರ್ಶನಕೆ;
ಸಮಹೃದಯನೆಂ ನಿನ್ನ ಹೃದಯ ಸಂದರ್ಶನಕೆ;
ರಸಕಲಾ ಸಂಕೇತದಾ ದಿವ್ಯದರ್ಶನಕೆ.
ದಿನಗಳೈದಂ, ಬಿಡದೆ, ರವಿಯುದಯದಿಂ ತೊಟ್ಟು
ನಡುವಗಲೊಳವನು ಬಾನ್ನೆತ್ತಿಗೇರ್ವನ್ನೆಗಂ,
ಹೇ ವರ್ಣಶಿಲ್ಪಿ, ನಿನ್ನಗ್ನಿಕೃತಿಗಳ ಮಧ್ಯೆ
ನಿಲ್ಲುತೆ, ತಪಂ ಗೈದೆನೆನ್ನಾತ್ಮಮುಂ ನಿನ್ನ
ನೋಂಪಿಯ ಪರಂಜ್ಯೋತಿಯಿಂ ಜ್ವಾಲೆಯಪ್ಪಂತೆ.
ಹೈಮಾಚಲೀಯಮಾ ನಿನ್ನ ಕಲೆ: ಮನ್ಮನಂ
ತಾನಾಯ್ತು ಹೈಮಾಚಲಸ್ಪರ್ಧಿ, ನಭಶ್ಚುಂಬಿ,
ರಸವಾರ್ಧಿಸಂಗಿ, ವಿಶ್ವವ್ಯಾಪಿ, ಬ್ರಹ್ಮಾಸ್ಮಿ!
ಆನಂದಮೊಳ್ಕುತೆ, ಕೃತಜ್ಞತಾ ಭಾರದಿಂ
ಮತ್ತೊಮ್ಮೆ ಋಣಿಯಾದೆನ್ನೈರ್ಲೆಂಡಿನಾ ಕವಿಗೆ,
ವರ್ಣಶಿಲ್ಪದ ನಿನ್ನ ರಸಸೃಷ್ಟಿಗಳನಲ್ಲಿ
ತಂದು ಮಂದಿರಗೈದ ಪುಣ್ಯಾತ್ಮನಿಗೆ.
ಆಹ,
ಏನು ಕಲೆ ನಿನ್ನದಯ್: ವಿಶ್ವತಾ ಸಂಸ್ಪರ್ಶಿ,

ಮೇಣ್ ಬ್ರಹ್ಮದರ್ಶಿ ! ಕಲ್ಪನೆ ಅಲ್ಪಮಾತ್ರದಿಂ
ಭೂಮಾನುಭೂತಿಯಂ ಮಂತ್ರಿಸಿ ಮಥಿಪುದಲ್ಲಿ :—
ಬೈಗುಗೆಂಪಿನ ಮರ್ಬ್ಬಿಸಂಚುಕಟ್ಟಿದ ಬಂಡೆ
ತಾನಾಯಿತದೊ ಸಮಾಧಿಸ್ಥ ಯೋಗೀಶ್ವರಂ ;—
ಉಷೆಯ ತಾವರೆವೆಳಗು ತುಟಿಸೋಂಕಿಸಿದ ತಳಿರ
ನೆತ್ತಿಯ ಮರಂ ಪ್ರಕೃತಿಯಾತ್ಮಕ್ಕೆ ತಾನಾಯ್ತು
ಸ್ವಾಪ್ನರೇಖಾಲಿಪಿಯ ಹಸ್ತಾಕ್ಷರಂ ;—ಶಿಲಾ
ಚೇತನವೆ, ತನ್ನ ಚಿರಜಡ ನಿದ್ರೆಯನ್ನುಳಿದು,
ಫೇನರೂಪಿಂ ಫಣೆಯನೆತ್ತಿ ಭೋರ್ಗರೆವಂತೆ
ಬಂದಪ್ಪಳಿಸಿತಿದೊ ಜಲೋಲ್ಲಾಸ ಕಲ್ಲೋಲ
ಮಾಲೆ ;—ಲೀಲಾಯಾತ್ರಿ ಲೋಲಪುಣ್ಯಾನಿಲಂ,
ಕಾಣ್, ಆಲಿಸದೊ ಅಲ್ಲಿ, ಮುಗುಳನೆಳ್ಚರಿಸುತಿದೆ
ರಸದ ಗರ್ಭದ ಗುಹ್ಯಮಂತ್ರಮಂ ಕಿವಿದೆಸೆಗೆ
ಪರ್ಚಿ ಸುಯ್ವಂತೆ ;—ಕಾಣದೊ ಅಲ್ಲಿ, ಕಾರ್ಗಾಳಿ,
ಬಂಡೆ ಮಂಡೆಯ ಬೆಟ್ಟದೊಂದು ಚಂಡಿಕೆಯಂತೆ
ನಿಂದ, ತಾಳೆಯ ಮರದ ಗರಿಗರಿತಲೆಯನೆಳೆದು
ಜರ್ಗ್ಗುತಿದೆ, ಸೃಷ್ಟಿಕಾಳಿಯ ಕೆದರ್‌ಮುಡಿವಿಡಿದ
ಮೋಕ್ಷತಾಂಡವ ಮುಷ್ಟಿಯೋಲ್ ;—ಮೇಘಪಂಕ್ತಿಯದೊ
ನಾವರಿಯುದಸ್ತಿತ್ವದಾಶ್ಚರ್ಯ ಸಂಕುಲಕೆ
ಸಂಕೇತ ಲಿಪಿಯವೊಲ್ ಪ್ರತಿಮಿಸಿದೆ, ಬಹುರೂಪಿ,
ಬಹುವರ್ಣಿ, ಬಹುಳ ಭಾವಪ್ರಚೋದಿ ; ಅನಂತ
ಸಂವೇದಿ ! ಓ ಇಲ್ಲಿ, ವಿಸ್ತೃತ ಸರೋವರದ
ನಿಸ್ತರಂಗಿತ ಸುಪ್ತಿ. ನೋಡಲ್ಲಿ, ದಡದಲ್ಲಿ,
ಕಂಡರಿಸಿದೊಲ್ ಗುಂಡುಗುಂಡಾಗಿ ಸಾಲ್ಗೊಂಡ
ಬಂಡೆಯ ಸುಖದ ತೃಪ್ತಿ. ಇಲ್ಲಿ ರಾತ್ರಿಯ ನಿದ್ರೆ ;
ಅಲ್ಲಿ ತಿಮಿರದ ಘನಿತಶಾಂತಿ. ಕಾಣೆಲ್ಲಿ ಅದೊ,
ಪಕ್ಷಿಯಿಂಚರ ಮಂಚದುಯ್ಯಾಲೆಯಂ ತೂಗಿ
ದುಮುಕುತಿದೆ ಬೆಳ್ಳಂಗೆಡೆಯುತರ್ಬಿ !
ಮೊದಲೆಲ್ಲಿ
ಕೊನೆಯೆಲ್ಲಿ ನಿನ್ನ ರಚನೆಯ ವಿಶ್ವವಿಸ್ತರಕೆ,

ರಸಋಷಿಯೆ, ಓ ವರ್ಣಶಿಲ್ಪಿ ? ಬಣ್ಣಗಳಲ್ತು,
ನಿನ್ನ ಹೃದಯದ ರಕ್ತವರ್ಣಗಳೆ ಕುಂಚಿಕೆಗೆ
ತೀರ್ಥಮೈಸಲೆ ಬರೆವ ಸಾಧನೆಗೆ! ಚಿತ್ರಗಳೊ,
ಬರಿಯ ಬರೆಪಗಳಲ್ತು: ಕಾಲಮಂ ದೇಶಮಂ
ಮೇಣನಂತಾಕಾಶದಾಂತರ್ಯಮಂ ಕೊರೆದು,
ಅವ್ಯಕ್ತದಂಗಂಗಳಂ ಬಣ್ಣದಿ ಪೊರಳ್ಚಿ,
ಕಡೆದ ಕನಸುಗಳಲ್ತೆ? ಧ್ಯಾನದಶರೀರತೆಗೆ
ಸಾಕಾರತೆಯನಿತ್ತು, ಮೌನಮಾಕೃತಿವೆತ್ತು,
ಕಲೆಯ ಹೆಪ್ಪಿಗೆ ಕನಸುಗಳೆ ಹೆತ್ತು, ಕಣ್ಬಡೆದು,
ರಸವೆ ಸಾಕ್ಷಾತ್ಕಾರಗೊಂಡಿರ್ಪುದೈ ನಿನ್ನ
ಈ ಪವಾಡದ ಚಿತ್ರನಾಕ್ಷತ್ರ ಶಾಲೆಯಲಿ:
ಧ್ಯಾನದಾನಂದದಲಿ ಲೀನಮೆನ್ನಾತ್ಮಮುಂ
ತಾನಿದೊ ಗಗನಚುಕ್ಕಿ!
ಓವ್ವೊ, ಸ್ಮೃತಿ ಎಂಬುದೆಯೆ
ಅಂದಿನನುಭವದೊಂದು ನೆನಪನೀಂಟುವ ಬಗೆಗೆ
ಇಂದು ವಿಸ್ಮೃತಿಯಾಯ್ತೆ! ಸಾಮಾನ್ಯದೀ ಮನೆಯ
ತಾರಸಿಯ ಮೇಲಿರ್ದು, ಭಾದ್ರಪದ ಮಾಸದೀ
ಸಂಧ್ಯಾದಿಗಂತದಾಕಾಶ ಶಿಲ್ಪಿಯ ಋಷಿಯ
ನೀಲ ಮನದಲಿ ಭವಿಸುತಿಹ ಮೇಘಕಲ್ಪನಾ
ಕ್ಷಣಿಕ ಗೋಪುರಗಳಂ, ನಂದನಾಪ್ಸರಿಯರಂ,
ಧೂಮ್ರಾದ್ರಿಯಂ, ಮುಗಿಲಕಣಿವೆಯ ಸರೋವರದ
ತಾಮ್ರಾರುಣ ಹರಿದ್ರ ಬಹುವರ್ಣರಮಣೀಯ
ಸಲಿಲಮಂ, ಮೋಡನಾಡಿನ ಕಾಡಿನೆತ್ತರದ
ಮತದ ಕೋಡಂ, ಹಿಂಗಾಲ್ಗಳೊಳ್ ನಿಮಿರ್ದೆದ್ದ
ಕಿರಣ ಧೂರ್ಜಟಿ ಕೇಸರಿಯ ಧೀರಭಂಗಿಯಂ,
ಮದ್ದಾನೆ ಸೊಂಡಿಲಂ, ಹೆಡೆಯ ಹಾವಂ, ಕಲಾಜಗದ
ಸಾಹಿತ್ಯ ಸಂಗೀತದಖಿಲ ವಿಭವಂಗಳಂ
ನೋಡುತಾತ್ಮೈಸುತಿರೆ, ಬಗೆಗೆ ಪೊತ್ತಿತೊ ನಿನ್ನ
ಅಂದಿನಾ ಚಿತ್ರಪ್ರದರ್ಶನದ ದರ್ಶನಂ,
ರೋರಿಕ್, ವಿದೇಶೀಯ ಹೇ ವರ್ಣಶಿಲ್ಪರ್ಷಿ!

ನಳನಿಲ್ಲಿ ತೊರೆದಗಲುತಿಹನು ದಮಯಂತಿಯಂ,
ನಿದ್ದೆಗೈದರ್ಧಾಂಗಿಯಂ. ಪ್ರಾಣಕಾಂತನಂ
ತನ್ನಂಕ ಪರ್ಯಂಕದೊಳಗಿಟ್ಟ ಸಾವಿತ್ರಿ
ನುಡಿಸುತಿಹಳಿದೊ ಮೃತ್ಯುರೂಪಮಂ. ಸೀತೆಯಂ
ಪೊತ್ತೋಡುತಿಹುದದೊ ದಶಗ್ರೀವ ಪುಷ್ಪಕಂ.
ಧ್ಯಾನಗೈದಿಹಸದೋ ಬುದ್ಧದೇವಂ : ನೋಡು,
ಕಾಣ್ಬುದಾ ಗುರುಮುದ್ರೆ. ಅದೊ ಅಲ್ಲಿ : ಬೇಲೂರೊ ?
ಹಳೆಬೀಡೊ ? ಶ್ರವಣಬೆಳ್ಗೊಳ ಗೋಮಟೇಶ್ವರನೊ ?
ಕಣ್ಣು ಕಿವಿಯಾಗುವೊಡೆ, ಕಾಣ್ಬುದನೆ ಕೇಳುವೊಡೆ,
ಆಲಿಸದೊ : ಪೊಣ್ಮುತಿಹುದಲ್ಲಿ ವೀಣಾಕ್ವಣಂ
ತಾನ ತಾನದ ಮಹಾಗಾನಮಂ ! ನೋಡಲ್ಲಿ :
ವಾಸುಕಿಯ ಮಿಣಿಮಾಡಿ, ಮಂದರವ ಮಥಿಮಾಡಿ,
ದೈತ್ಯದಾನವರದೊ ಕಲಂಕುವರ್ ಸಮುದ್ರಮಂ,
ಮಲೆಗೆ ಮಲೆವಂತೆ ತೆರೆಯುಬ್ಬಿ ಮೇಲ್ವಾಯ್ವವೊಲ್ !
ಕವನಗಳ್, ಬಿಳಿಕಾಗದದ ಮೇಲೆ ಬರಿಮಸಿಯ
ಬೀಳಲ್ತೆ, ಓದರಿಯದಾತಂಗೆ ? ಅಂತೆ, ತಿಳಿ,
ಮುಗಿಲುಗಳ್ :—ಬರಿಯ ನೀರಾವಿಗಳ್ ಜಡಮತಿಯ
ವಿಜ್ಞಾನಿಯಜ್ಞತೆಗೆ ; ಗಗನಕವಿ ಕಲ್ಪನೆಯ
ಸಂಜೀವ ಭಾವಗಳ್ ಋಷಿಯ ರಸವಿಜ್ಞಾನ
ದರ್ಶನಕೆ : ಸಾಕ್ಷಿಗಳತೀತದಸ್ತಿತ್ವಕ್ಕೆ ;
ಅನ್ಯಲೋಕಗಳನ್ಯ ರೀತಿಗೆ ಗವಾಕ್ಷಗಳ್ ;
ಭೂನಿಸರ್ಗದ ಪ್ರಾಕ್ತನಾದ್ಭುತ ಪೆಡಂಭೂತ
ಸೃಷ್ಟಿಯ ಪುನಃಸ್ಮೃತಿಯ ಬಾನ್‌ಬಗೆಯ ವಿಕೃತಿಗಳ್ ;
ಅಧ್ಯಾತ್ಮದರ್ಥ ಪ್ರತೀಕಗಳ್ ; ಆವೇಶ
ಚಿಹ್ನೆಗಳ್ ; ತಿರೆಗೆ ಸಗ್ಗದ ಸೆರಗುಸನ್ನೆಗಳ್ ;
ಆಕಾಶಪುಸ್ತಕದ ಅತ್ಯನಿರ್ವಚನೀಯ
ದೇವಭಾಷಾ ದೃಶ್ಯ ಕಾವ್ಯಗಳ್ !
ಈ ಊರೊ,
ಆ ಊರೊ, ಯಾವ ಊರಾದರೇನ್ ? ಗಿರಿಶಿರವೊ,
ಗೃಹಶಿರವೊ, ಅಲ್ಲಿಲ್ಲಿ ಎಂಬುದೇನ್ ? ಕಣ್ಮುಚ್ಚಿ

ಕಾಣೆ ಕಲಿಯಲ್, ಪರಬ್ರಹ್ಮದರ್ಶನವೀವ ೧೧೦
ವೇದ ಮೇಣುಪನಿಷತ್ತ್ರಕ್ಕುಮೀ ಬಾನ್ಮುಗಿಲ್,
ಮೂಕ ಘೋಷಂಗೈವ ಮಂತ್ರಂಗಳಂತೆವೋಲ್,
ಸಿದ್ಧಗುರು ಮೌನದೋಲ್, ಶಬ್ದ ಪ್ರಮಾಣದೋಲ್ !



# ಶ್ರವಣಬೆಳ್ಗೊಳದ ಗೋಮಟೇಶ್ವರನ ಸಾನ್ನಿಧ್ಯದಲ್ಲಿ

ಆರೊ ತೆಕ್ಕನೆ ತುಡುಕಿ ಬಾಯ್ ಮುಚ್ಚಿ ಹಿಡಿದಂತೆ
ಮೌನ ಭಾರದಿ ಮಾತು ಮೂರ್ಛೆ ಹೋಗಿಹುದಿಲ್ಲಿ
ಶ್ರೀ ಗೋಮಟೇಶ್ವರನ ಭವ್ಯ ಸನ್ನಿಧಿಯಲ್ಲಿ!
ಗಾಂಭೀರ್ಯ ಗೌರವದ ಹೊಸಲು ಚಿತ್ತವನೊತ್ತಿ
ತುಳುಕುತಿದೆ ಹೃದಯದಲಿ. ಮಣಿಯುತಿದೆ ದೈನ್ಯದಲಿ
ನನ್ನಾತ್ಮವಲರಿನ ಹೊರೆಗೆ ಬಳ್ಳಿ ಮಣಿವಂತೆ
ತಿರೆಯಡಿಗೆ. ಧ್ಯಾನ ಮೂರ್ತಿಯ ಮೊಗದಿ ಕಣ್ದಿಟ್ಟಿ
ನಟ್ಟು ನಿಷ್ಪಂದವಾಗುತಿದೆ. ಮುಗಿಲನು ತಿವಿದು
ಬಾನನು ಮುಟ್ಟಿ ನಿಲುವ ಹೆಬ್ಬೆಟ್ಟದೆಡೆಯಲ್ಲಿ,
ಮುಸುಗಿ ಬಹ ಬೈಗುಮಬ್ಬಿನಲಿ, ತಾನೊಬ್ಬನೆಯೆ
ನಿಂತದರ ನೆತ್ತಿಯ ಕಡೆಗೆ ನೋಡುತಿರುವಂತೆ;
ಕಣ್ಗೆ ದಿಟ್ಟಿಯ ಹೊಟ್ಟೆ ಡೊಳ್ಳಾಗಿ ಬಿರಿವುದೆನೆ
ಹಬ್ಬಿ ಹಸರಿಸಿ ಮೇರೆ ಮೀರುವಾ ಕಡಲಿನೆಡೆ
ನಿಂತೊಬ್ಬನೆಯೆ ನೋಡುವಂತೆ; ಕದ್ದಿಂಗಳಲಿ
ಕಲ್ಗತ್ತಲೆಯ ರುಂದ್ರ ರಾತ್ರಿಯಲಿ ಶತಕೋಟಿ
ಕೋಟಿ ಪ್ರಯುತ ನಿಯುತ ಸಂಖ್ಯೋಪಸಂಖ್ಯೆಯಾ
ನಕ್ಷತ್ರಸಾಂದ್ರ ವಿಸ್ತೃತ ನಭವನೇಕಾಂಗಿ
ನೋಳ್ಪಂತೆ—ಭವ್ಯತೆಯ ಭಾವದಾವೇಶದಿಂ
ರೋಮಾಂಚವಾಗುತಿಹುದೆನ್ನ ಮೈ! ಅಮೃತದಲಿ
ಮುಳುಗಿ ಮೃತವಾಗುತಿದೆ ನಾನೆಂಬ ವ್ಯಕ್ತಿಕ್ರಿಮಿ!

ದೈತ್ಯ ಕಲೆಯಿದು; ದಿವ್ಯದೈತ್ಯಕಲೆ! ಕಲ್ಲಿನಲಿ,
ನಿರ್ಜೀವ ಜಡತೆಯಲಿ, ನಗೆಗೆಡೆಯ ನಗ್ನತೆಗೆ,
ಇಂಥ ಭೀಮಾಕೃತಿಗೆ, ಚಿರಜೀವ ಗಾಂಭೀರ್ಯ
ಭವ್ಯತಾ ಮುದ್ರೆಯನ್ನೊತ್ತಿದೀ ದಿವ್ಯಕಲೆ
ದೈತ್ಯಕಲೆ! ಎದೆಯಿದ್ದರಿಲ್ಲಿ ನಗು ನೋಡುವಂ,
ಬತ್ತಲೆಗೆ ಕಿಲಕಿಲನೆ ನಗುವ ಓ ಲಘುಹೃದಯಿ!
ಎಳ್ಳುನೀರಹುದಿಲ್ಲಿ ಹೀನತೆಗೆ, ನೀಚತೆಗೆ;

ಬೆಳಿನೀರು ಭವ್ಯತೆಗೆ, ದಿವ್ಯತೆಗೆ. ಶಿಶುಮುಖದ
ಮುಗ್ಧತೆ, ಸಮಾಧಿಸ್ಥನಾನಂದ ಗಾಂಭೀರ್ಯ,
ವಜ್ರದ ಕಠೋರತೆ, ಕುಸುಮ ಕೋಮಲತೆ, ಮೇಣ್
ಸತ್ಯದ ರಹಸ್ಯ, ಬ್ರಹ್ಮದ ಅನಿರ್ವಚನೀಯತೆ
ಎಲ್ಲ ಮೈವೆತ್ತಿರುವುವೀ ದಿಗಂಬರ ಮಹಾ
ನಿರ್ವಾಣ ಮೂರ್ತಿಯಲಿ : ಇಲ್ಲ ಬಾಯಿಗೆ ಬೀಗ!
ನುಡಿಗೆ ಮೌನದ ಸಿಡಿಲು ಹೊಡೆಸಂತಿರುವುದೀಗ!

ಅರ್ಹಂತ ಗುರುದೇವ, ಓ ಗೋಮಟೇಶ್ವರನೆ,
ನಗ್ನತೆಗೆ ನಾಚದಿಹೆ; ಬತ್ತಲೆಗೆ ಬೆದರದಿಹೆ.
ಹುಸಿ ನಾಗರಿಕ ವೇಷದಿಂದಲ್ಪತೆಯ ಮುಚ್ಚಿ
ಮೆರುಗು ಬೆರಗಿನ ಮೋಸಗೈಯದಿಹೆ. ಮುಚ್ಚು ಮರೆ
ತಾನೇಕೆ ಅಲ್ಪತಾ ಲವಲೇಶವಿಲ್ಲದೆಯೆ
ಸರ್ವತ್ರ ಸರ್ವದರೊಳುಂ ಭೂಮನಾಗಿರುವ
ಮಹತೋ ಮಹೀಯನಿಗೆ ನಿನಗೆ? ಗುಟ್ಟಿನ ರಟ್ಟು
ಕೇಡು ನೀಚತೆ ಹೀನತೆಯ ಹೊತ್ತಗೆಗೆ ಬೇಕು;
ಗಗನ ವಿಸ್ತಾರದೌದಾರ್ಯಕದು ಬೇಕೆ? ಸಾಕೆ?
ನಿಜ ಮಹಿಮೆ ನಗ್ನತೆಗೆ ಅಳುಕಬೇಕಾಗಿಲ್ಲ.
ಬಡಕಲಿಗುಡುಗೆ ಬೇಕು, ಕಲಿಯ ಮೈಗೇತಕದು!
ಕೀಳ್ಗಳಿಗೆ ವೇಷವಿಲ್ಲದೆಯೆ ಗೌರವವಿಲ್ಲ :
ದೊರೆಯನೆಳೆತಂದು ಬಟ್ಟೆಯ ಬಿಚ್ಚಿ ಮುಡಿಗಳಚಿ
ನೋಡಿದರೆ ತಿಳಿಯುವುದು ವೇಷಕೋ ವ್ಯಕ್ತಿಗೋ
ಆರ್ಗೆ ಗೌರವವೆಂದು! ಉಡುಗೆ ತೊಡುಗೆಯೊ ಆಳೊ
ದಿಟದರಸು ಯಾರೆಂದು! ಎನಿಬರೆಮ್ಮೊಳಗಿಹರ್
ಬತ್ತಲಾಗಿಯುಮಿಳೆಯ ಗೌರವಂಬಡೆವವರ್?
ಕಾವಿಯಿಂ ಗುರುವಾಗಿ, ಹೊನ್ನಿನಿಂ ದೊರೆಯಾಗಿ,
ರಣದುಡುಗೆ ದೆಸೆಯಿಂದೆ ರಣಧೀರನೆಂದಾಗಿ,
ಜನಿವಾರದಿಂದೆ ಬ್ರಾಹ್ಮಣನಾಗಿ, ಬೂದಿಯಿಂ
ಶಿವಭಕ್ತನಾಗಿ, ವೈಷ್ಣವನಾಗಿ ನಾಮದಿಂ
ಮೆರೆದುರಿವರೆಲ್ಲರೂ ಬಂದು ಕಲಿಯಲಿ ಇಲ್ಲಿ

ನಗ್ನತೆಯ ಮಹಿಮೆಯಂ ನಿನ್ನ ಸಾನ್ನಿಧ್ಯದಲ್ಲಿ!
ಬೋಳ್, ಕಾವಿ, ರುದ್ರಾಕ್ಷಿ, ವೈರಮುಡಿ, ಜರಿಯಮಡಿ,
ಕತ್ತಲೆಯ ಗರ್ಭಗುಡಿ ಮೊದಲಾದುವೆಲ್ಲವಂ
ತೊರೆದು, ಸತ್ಯದ ದಿಗಂಬರತೆಯೊಂದನೆ ಒಲಿದು,
ಭೂಮ್ಯಂತರಿಕ್ಷಗಳ ಸಂಧಿಸುತ ನಿಂತಿರುವ,
ಸೌಂದರ್ಯದಾಚೆಯಾ ಭವ್ಯತಾಸೀಮೆಯಲಿ
ನೆಲೆಸಿರುವ, ಓ ಎನ್ನ ನಗ್ನಗುರುದೇವ, ನಮೋ!
ನಿನ್ನ ಈ ದಿವ್ಯ ನಿರ್ಲಕ್ಷತಾ ಸ್ಥಿರತೆಯಂ,
ಭೂಮತೆಯ ಭವ್ಯತೆಯ ಬ್ರಹ್ಮಗಾಂಭೀರ್ಯಮಂ
ದಯಪಾಲಿಸೆನಗೆಂದಿಗೂ ಮಾಸದಂದದಲಿ,
ಮೌನಸವರತ ಬೆಳಗುವೋಲ್, ಶ್ರೀ ಗೋಮಟೇಶ!



# ನಿರ್ವಾಣಷಟ್ಕಂ*

ಬುದ್ಧಿ ಮನ ಚಿತ್ತಹಂಕಾರ ನಾನಲ್ಲ ;
ಕಣ್ಣು ಕಿವಿ ಮೂಗಲ್ಲ, ನಾಲಗೆಯುಮಲ್ಲ ;
ನಭವಲ್ಲ, ಧರೆಯಲ್ಲ, ಶಿಖಿವಾಯುವಲ್ಲ ;
ಸಚ್ಚಿದಾನಂದಾತ್ಮ ಶಿವ ನಾನು ನಾನು !

ಪಂಚವಾಯುಗಳಲ್ಲ, ಪ್ರಾಣ ನಾನಲ್ಲ ;
ಸಪ್ತಧಾತುಗಳಲ್ಲ, ಕೋಶವೈದಲ್ಲ;
ಕರ್ಮಾಂಗ ವಿಷಯೇಂದ್ರಿಯಂಗಳಾನಲ್ಲ ;
ಸಚ್ಚಿದಾನಂದಾತ್ಮ ಶಿವ ನಾನು ನಾನು !

ದ್ವೇಷರಾಗಗಳಿಲ್ಲ, ಲೋಭಮೆನಗಿಲ್ಲ ;
ಮೋಹ ಮದ ಮಾತ್ಸರ್ಯ ಭಾವಮೆನಗಿಲ್ಲ ;
ಧರ್ಮಾರ್ಥ ಕಾಮಾದಿ ಮೋಕ್ಷ ನಾನಲ್ಲ;
ಸಚ್ಚಿದಾನಂದಾತ್ಮ ಶಿವ ನಾನು ನಾನು !

ಪಾಪಪುಣ್ಯಗಳಲ್ಲ, ಸುಖದುಃಖವಲ್ಲ ;
ಮಂತ್ರತೀರ್ಥಗಳಲ್ಲ, ವೇದ ಮಖವಲ್ಲ ;
ಭೋಜ್ಯ ಭೋಜನವಲ್ಲ, ಭೋಕ್ತ ನಾನಲ್ಲ ;
ಸಚ್ಚಿದಾನಂದಾತ್ಮ ಶಿವ ನಾನು ನಾನು !

ಜಾತಿ ಭೇದಗಳಿಲ್ಲ, ಮೃತ್ಯು ಭಯವಿಲ್ಲ ;
ಜನ್ಮ ಮೃತ್ಯುಗಳಿಲ್ಲ, ತಂದೆತಾಯಿಲ್ಲ ;
ಬಂಧು ಸಖರಿಲ್ಲ, ಗುರುಶಿಷ್ಯರಾರಿಲ್ಲ ;
ಸಚ್ಚಿದಾನಂದಾತ್ಮ ಶಿವ ನಾನು ನಾನು !

ನಿರ್ವಿಕಲ್ಪನು ನಾ ನಿರಾಕಾರ ನಾನು !
ಸರ್ವೇಂದ್ರಿಯಾತೀತ ಸರ್ವತ್ರ ನಾನು ;
ಕಾಲದೇಶಾತೀತ ವಿಶ್ವವಿಭು ನಾನು !
ಸಚ್ಚಿದಾನಂದಾತ್ಮ ಶಿವ ನಾನು ನಾನು !

* ಶ್ರೀ ಶಂಕರಾಚಾರ್ಯ ವಿರಚಿತದ ಅನುವಾದ.

# ಸಮಾಧಿ*

ಅಲ್ಲಿ ಶಶಿ ಸೂರ್ಯರಿಲ್ಲ ;
ಅಲ್ಲಿ ನಿಶೆ ದಿನಗಳಿಲ್ಲ ;
ಆ ಮಹಾ ಶೂನ್ಯದೊಳು
ಬಿಂಬ ಬ್ರಹ್ಮಾಂಡಮಹ !
ತೇಲುತಿದೆ ಛಾಯೆಯಂತೆ !

ಸುಳಿಮನದ ಶೂನ್ಯದಲ್ಲಿ
ಅಚಿರಮಾದೀ ವಿಶ್ವವು
ಮುಳುಗುತಿದೆ ತೇಲುತಿದೆ
ಮುಳುಮುಳುಗಿ ತೇಲಿ ಸದಾ
'ಅಹಮಸ್ಮಿ' ಸೆಳವಿನಲ್ಲಿ !

ಮೆಲುಮೆಲನೆ ಆ ಛಾಯೆಯೂ
ಬ್ರಹ್ಮಾಂಡ ಗತಮಾಗೆ ತಾಂ
'ನಾನಿಹೆನು' 'ನಾನಿಹೆನು'
ಎಂಬಾ ಪ್ರವಾಹವೊಂದೇ
ಪ್ರವಹಿಪುದು ಬಿಡುವಿಲ್ಲದೆ !

ಆಹಹ ! ಅದು ನಡೆಗೆಟ್ಟಿತು !
ಹೊಸಲು ಮುಂಬರಿಯದಿಹುದು !
ಶೂನ್ಯ ತಾಂ ಶೂನ್ಯಗತ !
ವಾಙ್ಮನಾತೀತಮದು !
ಸಿದ್ಧನಿಗೆ ವೇದ್ಯಮಹುದು !

* ಸ್ವಾಮಿ ವಿವೇಕಾನಂದರಿಂದ.

# ನಾ ನಂಬಿದೆ

ನಾ ನಂಬಿದೆ !—
ಹೇಳಿದರು ಅವರೆಲ್ಲ
ನೀನು ಬರಿ ದೊರೆಯೆಂದು.
ನಾ ನಂಬಿದೆ.—
ಮಿಂಚಿಹುದು ಕಣ್ಣಲ್ಲಿ,
ಗುಡುಗಿಹುದು ದನಿಯಲ್ಲಿ,
ಕಾರ್ಮುಗಿಲು ಮೈಯಲ್ಲಿ ;
ನೀ ರುದ್ರನೆಂದು !
ಭಯ ಭಕ್ತಿ ಬೇಕೆಂದು
ಕೈ ಮುಗಿಯಬೇಕೆಂದು
ನೀ ಬಂದ ಕಾಲದಲಿ
ಕಾಲ್ಗೆರಗು ಎಂದು.

ನಾ ಕಾದು ನಿಂತಿದ್ದೆ,
ಎದೆ ನಡುಗಿ ಹೆದರಿದ್ದೆ,
ಏನೆಂತೊ ಎಂದು :
ನೀ ಬಂದೆ ದೂರದಲಿ
ಸುಂದರಾಕಾರದಲಿ ;
ಶಾರದಾಕಾಶದಲಿ
ಬೆಳ್ಮುಗಿಲ ವೇಷದಲಿ.
ಚಂದ್ರಿಕೆಯ ಸೌಂದರ್ಯ,
ಚೈತ್ರ ಮಾಧುರ್ಯ !
ಮಿಂಚಿಲ್ಲ, ಗುಡುಗಿಲ್ಲ,
ಕಾರ್ಮುಗಿಲು ಇಲ್ಲ.
ನೋಡಿದರೆ ದೊರೆಯಲ್ಲ !
ನೀನೆನ್ನ ನಲ್ಲ !

ಕೈಮುಗಿಯಲಿಲ್ಲ ನಾ,
ಕಾಲ್ಗೆರಗಲಿಲ್ಲ ನಾ ;
ಬಿಗಿಯಪ್ಪಿ ಮುತ್ತಿಟ್ಟು
ನಾ ನಂಬಿದೆ !
ಮೈ ಮರೆತು ಮುತ್ತಿಟ್ಟು
ನಾ ನಂಬಿದೆ !



# ಶ್ರೀ ಕೃಷ್ಣಜನ್ಮಾಷ್ಟಮಿ

ರಾಕ್ಷಸ ಕಂಸನ ಮಧುರೆಯ ಮೇಲೆ
ಘನ ಘೋರಾಂಧತೆ ಕವಿದಿತ್ತು;
ಮಿಂಚಿನ ಸಿಡಿಲಿನ ಮೋಡದ ಲೀಲೆ
ತಿರೆಯ ಮೋರೆಯನು ತಿವಿದಿತ್ತು;
ಕೆರಳಿದ ಕೇಸರಿಯಂದದಿ ಗರ್ಜಿಸಿ
ಗಾಳಿಯು ಭರದಲಿ ಬೀಸಿತ್ತು;
ಮುಗಿಲಿನ ಚಿಪ್ಪೊಡೆದಾಲಿಯ ಕಲ್ಗಳ
ಕವಣೆಯವೋಲ್ ಮಳೆ ಸೂಸಿತ್ತು!
ಘನಘೋರಾಂಧತೆ ಕವಿದಿತ್ತು;
ತಿರೆಯ ಮೋರೆಯನು ತಿವಿದಿತ್ತು;
ಗರ್ಜಿಸಿ ಗಾಳಿಯು ಬೀಸಿತ್ತು;
ಕವಣೆಯ ಕಲ್ಮಳೆ ಸೂಸಿತ್ತು;
ರಾಕ್ಷಸ ಕಂಸನ ಮಧುರೆಯ ಮೇಲೆ
ಶತ ಶತಮಾನಗಳಾಚೆಯ ದೂರದ
ದ್ವಾಪರ ಯುಗದಲ್ಲಿ!

ಹೆದರಿದ ಹಕ್ಕಿಯಮರಿ ಹುದುಗಿತ್ತು
ತಾಯಿಯ ರೆಕ್ಕೆಯಡಿ;
ಕೊಟ್ಟಿಗೆಯಲಿ ಕರು ಮೈಗರೆದಿತ್ತು
ಹಸುವಿನ ಹೊಟ್ಟೆಯಡಿ!
ಹುಚ್ಚು ಹಿಡಿದುದೆನೆ ತಲೆಯಲ್ಲಾಡಿ
ತೂಗಿತು ಹೆಮ್ಮರ ಮುಡಿಗೆದರಿ;
ಕಿವಿ ಬಿರಿಯುವ ಸಿಡಿಲೆರಗಿದ ಹೊಡೆತಕೆ
ನಡುಗಿತು ಜಗ್ಗನೆ ನೆಲವದುರಿ!
ಮುಗಿಲಿನ ಹಾವಿನ ಮಿಂಚಿನ ನಾಲಗೆ
ನೆಕ್ಕಲು ಕತ್ತಲೆಯಂ
ಹಗಲಿಣುಕಿದವೊಲು ತೋರ್ದುದು ತೊಯ್ದಿಳೆ
ತನ್ನಯ ಬತ್ತಲೆಯಂ!

ಮತ್ತದೊ ಮುತ್ತಿತು ಕತ್ತಲ್ಗಾಡಿಗೆ;
ತೀವಿತು ಕುರುಡಂ ನೋಟದ ಬೀಡಿಗೆ!
ಆದರದೇನದೊ ಕತ್ತಲ್ಗಡಲಲಿ
ಓ ತೇಲುತ್ತಿದೆ ಸೊಡರಕುಡಿ?
ಹೊಳೆಯುತ್ತಿದೆ ಮಿಂಚಿನ ಹನಿಯಂದದಿ
ಇರುಳ್ವೆಣ್ ಮುಡಿಯಾ ರನ್ನಗಿಡಿ!

ರಾಕ್ಷಸ ಕಂಸನ ಕಾರಾಗಾರದಿ
ಬಂಡೆಯ ಗೋಡೆಯ ಕಾರಾಗಾರದಿ
ಕಾವಲು ಬೇಲಿಯ ಕಾರಾಗಾರದಿ
ಮಿಣುಕುತ್ತಿದೆ ಹಣತೆಯ ದೀಪ:
ದೇವಕಿ ವಸುದೇವರ ಸಿರಿವಸಿರಿಂ
ಕಂಸನ ಪಾಪದ ಕಾರ್ಗತ್ತಲೆಯಂ
ಸೂಣೆಯಲು ಜನಿಸಿದೆ ಶಿಶುರೂಪ!
ತಿಂಗಳೆಂಟರೊಳೆ ಹುಟ್ಟಿದೆ ಹಸುಳೆ
ಕಂಸನ ವಂಚಿಸಲೆಂಬಂತೆ!
ಹೊರಗಡೆ ಹೊಯ್ಯುತ್ತಿದೆ ಬಿರುಗಾರ್ಮಳೆ
ಶಿಶುವನು ಸಂರಕ್ಷಿಸುವಂತೆ.
ತಂದೆತಾಯಿಯರು ಮೋಹದ ಮೂರ್ತಿಯ
ಹಣತೆ ಬೆಳಕಿನಲಿ ನೋಡಿದರು;
ನೆನೆದು ಭವಿಷ್ಯವ, ಮಗುವನು ಮುದ್ದಿಸಿ,
ರಕ್ಷಕನನು ಕೊಂಡಾಡಿದರು.

"ಪಾಪಿಗೆ ತಿಳಿದರೆ ಪೂವಡಿವಿಡಿದು
ಬೀಸುವನಯ್ಯೋ ಬಂಡೆಗೆ ಬಡಿದು!
ಏಳು ಗರ್ಭಗಳ ಸೀಳ್ದಾ ಕ್ರೂರಿ
ಕುದಿದಿಹನೆಂಟನೆಯದನೇ ಹಾರಿ!
ವಸುದೇವನೆ, ಪತಿದೇವನೆ, ಪೊರೆಯೈ;
ಬೆಳಗಾಗುವ ಮೊದಲೆಂತೋ ಪೊರೆಯೈ!"

## ಶ್ರೀ ಕೃಷ್ಣಜನ್ಮಾಷ್ಟಮಿ

ಮೊರೆಯಿಡುವಾ ಮಡದಿಯ ನುಡಿಗೇಳಿ,
ಕಣ್ಣೀರೊರಸಿ, ಕೆಚ್ಚನು ತಾಳಿ,
ತಾಯಿಯ ಬೆಚ್ಚನೆ ಬಟ್ಟೆಯ ಸುತ್ತಿ,
ಮೇಲೆದ್ದನು ಶಿಶುವನು ಎದೆಗೊತ್ತಿ.
ಹೊರಗಡೆ ಕತ್ತಲೆ, ಬಿರುಮಳೆ, ಗಾಳಿ :
ಕುಣಿದಳು ಇರುಳಿನ ಕಾಳಿ ಕರಾಳಿ !

ನಿದ್ರಾದೇವಿಯ ವಕ್ಷವನಪ್ಪಿ
ಕಾವಲು ಬೆಚ್ಚನೆ ಮಲಗಿತ್ತು ;
ಏನಚ್ಚರಿ : ತನ್ನಷ್ಟಕೆ ತಾನೆ
ಬಾಗಿಲು ಮೆಲ್ಲನೆ ತೆರೆದತ್ತು.
ತಂದೆಯ ಮೋರೆಗೆ ಭರ್ರನೆ ಬೀಸಿತು
ತುಂತುರ್ಗೂಡಿದ ಚಳಿಗಾಳಿ ;
ಲೆಕ್ಕಿಸದೇನನು ನುಗ್ಗಿದನಾತನು
ಕಗ್ಗತ್ತಲ್ಗಬ್ಬವ ಸೀಳಿ !
ಕೆಸರಲಿ ನೀರಲಿ ಕಷ್ಟದಿ ನಡೆದು
ಯಮುನೆಯ ದಡವನು ಸೇರಿದನು ;
ಮಿಂಚಿನ ಬೆಳಕಿಗೆ ಮಿಂಚುತ ಹರಿದಾ
ಕರ್ವೊನಲಿನ ನೀರ್ದಾರಿಯನು
ನೋಡಿ ಸನೆವೆಯಿಕ್ಕದೆ : ಭಯವೇಕೆ ?
ಶ್ರೀ ಕೃಷ್ಣನ ಹೊತ್ತವಗಳುಕೇಕೆ ?
ನಡೆ ಮುಂದಕೆ, ಓ ವಸುದೇವ !
ಸೃಷ್ಟಿನಿಯಮಗಳ ನಿಧಿಯಾದವನಿಗೆ,
ಪಂಚಭೂತಗಳ ವಿಧಿಯಾದವನಿಗೆ
ಹೊಳೆ ಮಲೆವುದೆ ಹೇಳ್, ವಸುದೇವ ?
ಯಾರಿಗು ದಾರಿಯ ಬಿಡದಿಹ ಮಂದಿ
ದೊರೆಗರುಗಾಗುವರೆಂತಂತೆ
ಹನಿಹನಿಯೂ ಹಿಂಜರಿವುದು ಹೆದರಿ
ಸ್ವಾಮಿಗೆ ದಾರಿಯ ಬಿಡುವಂತೆ !

ಇಂತಾಲೋಚಿಸಿ ನಡೆದನು ಮುಂದೆ:
ಜಗದೊಡೆಯನ ಅಡಿ ಸೋಂಕುವವರೆಗೆ
ನೀರಿಳಿಸದೆ ನೆರೆಯೇರ್ದಾ ತೊರೆಗೆ
ಚುಮ್ಮೆಂದಿತು ಮೈ! ಸೋಂಕಿಗೆ ಹಿಂದೆ
ಸರಿದಳು ತರಳ ತರಂಗಿಣಿ ಯಮುನೆ!
ಸೆಡೆತಳು ಭಯಭಕ್ತಿಗೆ ರಯಗಮನೆ!
ದಾಂಟಲು ಶ್ರೀಕೃಷ್ಣನ ತಂದೆ
ತುಂಬಿತು ಹೊಳೆ ಹಿಂದೆ!

ಹೆದರದಿರಮ್ಮಾ ದೇವಕಿ, ತಾಯಿ:
ಕಂಸನ ಗಂಟಲ ಮುರಿಯುವ ಬಾಯಿ,
ಪಲ್ದೆರೆದಿದೆ ಬಿದಿಬೇಂಟೆಯ ನಾಯಿ!
ನಂದಗೃಹದಿ ಕಂದನು ಸುಕ್ಷೇಮಿ;
ತ್ರಿಭುವನ ಮೋಹನ ಧರ್ಮಸ್ವಾಮಿ;
ಸಕಲಾತ್ಮರ ಪರಮಾರ್ಥಪ್ರೇಮಿ!



# ತನುವು ನಿನ್ನದು

ತನುವು ನಿನ್ನದು, ಮನವು ನಿನ್ನದು,
ಎನ್ನ ಜೀವನ ಧನವು ನಿನ್ನದು,
ನಾನು ನಿನ್ನವನೆಂಬ ಹೆಮ್ಮೆಯ
ಋಣವು ಮಾತ್ರವೆ ನನ್ನದು!

ನೀನು ಹೊಳೆದರೆ ನಾನು ಹೊಳೆವೆನು;
ನೀನು ಬೆಳೆದರೆ ನಾನು ಬೆಳೆವೆನು;
ನನ್ನ ಹರಣದ ಹರಣ ನೀನು,
ನನ್ನ ಮರಣದ ಮರಣವು!

ನನ್ನ ಮನದಲಿ ನೀನೆ ಯುಕ್ತಿ,
ನನ್ನ ಹೃದಯದಿ ನೀನೆ ಭಕ್ತಿ,
ನೀನೆ ಮಾಯಾಮೋಹ ಶಕ್ತಿಯು,
ನನ್ನ ಜೀವನ ಮುಕ್ತಿಯು!



# ಯುಕ್ತಿ—ಭಕ್ತಿ

ನಿನ್ನ ಪಾದಪೂಜೆಗೆಂದು
ಹೂವುಗಳನು ತಿರಿದುತಂದು
ಹಾದಿ ಬಳಿ ಬಿಸಿಲಿನಲಿ,
ಓ ಮಧುರ ಚಿನ್ಮಯ
ಉದಯದಿಂದೆ ಬಿಡದೆ ಕಾದೆ.
ಕಾದೆ, ನೀನು ಬರದೆ ಹೋದೆ.
ನೋಡಿದರೆ ಬಟ್ಟೆತಿರೆ
ಶೂನ್ಯ, ಕುಟಿಲ, ಮೃಣ್ಮಯ!

ಹೊತ್ತು ಮೂಡಿ, ಬೆಳೆದು, ಮಾಗಿ,
ಕತ್ತಲಿಳಿಯೆ ಸಂಜೆಯಾಗಿ,
ನಿನ್ನ ಹಳಿದು, ನಿನಗೆ ಮುಳಿದು,
ಮರೆಯಲೆಳಸಿ ನಿನ್ನನು,
ಇತರ ಪಥಿಕ ಜನರ ಕರೆದು
ಹೂವುಗಳನು ಹರಿದು ಹರಿದು
ಕೊಡುತ ಬರಲು ಮಾಲೆ ಬರಿದು!
ನುತಿಸಿ ನಡೆದರೆನ್ನನು.

ಜನರ ನುತಿಗೆ ಹೆಮ್ಮೆವಡುತೆ
ಮನೆಯು ಕಡೆಗೆ ಅಡಿಯನಿಡುತೆ
ನಡೆಯುತಿರೆ ಕಂಡೆನಹಾ
ನಿನ್ನ ಸ್ವರ್ಣ ರಥವನು!
ಆದರಯ್ಯೊ ಮಾಲೆಯೆಲ್ಲಿ
ಪೂಜೆಯೆಸಗೆ ಹೂಗಳೆಲ್ಲಿ?
ನಯನ ಧಾರೆಯಿಳಿದು ಸೋರೆ
ನೋಡಿ ನಿಂತೆ ಪಥವನು!

## ಯುಕ್ತಿ—ಭಕ್ತಿ

ಮಿಂಚನೆಸೆದು ಗುಡುಗಿ ರಥವು
ಬರಲು ನಡುಗಿತೆನ್ನ ಪಥವು.
ಕಾಣ್ಕೆಗಾಗಿ ಕಂಬನಿಯನೆ
  ಹಿಡಿದೆ ಬೊಗಸೆಗೈಯಲಿ!
ತಿರಿದ ಹೂವು ಕೊನೆಗೆ ವ್ಯರ್ಥ,
ಕರೆದ ಕಣ್ಣನೀರೆ ಅರ್ಥ!
ಯುಕ್ತಿ ತುದಿಗೆ ವ್ಯರ್ಥವಾಗೆ
  ಭಕ್ತಿ ಸಾರ್ಥಗೆಯ್ಯಲಿ!



# ಪೂಜೆ

ಹರಕು ಬಟ್ಟೆ ತಿರುಕನಂತೆ
ಮನೆಯ ಮುಂದಕೆ
ನೀನು ಬರಲು ನಾನೆಂದೆ
"ಹೋಗು ಮುಂದಕೆ!"

ಹೊಳೆವ ಹೊನ್ನ ತಟ್ಟೆಯಲ್ಲಿ
ಮುತ್ತು ರತ್ನಗಳನು ಚೆಲ್ಲಿ
ಪೂಜೆಗೆಂದು ಸಂಜೆಯಲ್ಲಿ
ಗುಡಿಗೆ ಹೋದೆನು.
ಅಯ್ಯೋ, ಗುಡಿಯ ಪೀಠದಲ್ಲಿ
ಮೂರ್ತಿಯಿಲ್ಲ! ದೇವರೆಲ್ಲಿ?
ಹರಕು ಬಟ್ಟೆ ತಿರುಕನಲ್ಲಿ
ಲೀನವಾದನು!



# ಸಭ್ಯತಾ ದೇವತೆ*

ಮನುಜರಲಿ ದೇವತ್ವದಾಕಾಂಕ್ಷೆಯಳಿದಿಲ್ಲ ;
ಉಳಿದಿಹುದು ; ದಿನದಿನಕೆ ಬೆಳೆಯುತಿದೆ ; ಎಂಬುದಕೆ
ಸಾಕ್ಷಿಯಿದು: ದಶದಶ ಸಹಸ್ರ ಜನ ಕಿಕ್ಕಿರಿದು
ನೆರೆದಿಹುದು ಬಿಸಿಲಿನಲಿ, ಮಾನವ ಮಹಾತ್ಮನಿಗೆ
ಗೌರವಾರಾಧನೆಯ ನೈವೇದ್ಯವನು ಸಲಿಸೆ !
ಇವನು ಕಲ್ಲನು ರೊಟ್ಟಿಮಾಡಿಲ್ಲ ; ಹುಲ್ಲಿನಲಿ
ನಿಶಿತಾಸ್ತ್ರವನು ಮಂತ್ರದಿಂ ರಚಿಸಿ ದಾನವನ
ಕೊಂದಿಲ್ಲ ; ಅರ್ಧನರ ಅರ್ಧಮೃಗ ರೂಪದಲಿ
ಕಂಭವನ್ನೊಡೆದು ಗುಡುಗುಡಿಸಿ ಮೂಡಿದನಿಲ್ಲ ;
ದಶಶಿರನ ಕೊಂದಿಲ್ಲ ; ಚಕ್ರಧರನೂ ಅಲ್ಲ.
ಅದ್ಭುತ ಪವಾಡಗಳ, ಅಘಟಿತ ವಿಚಿತ್ರಗಳ
ಗೋಜಿಗಿವನೆಂದಿಗೂ ಹೋಗುವಾತನೆ ಅಲ್ಲ !
ಮತ್ತಾವ ದೇವತ್ವದೀಕ್ಷಣೆಗೆ ನೆರೆದಿಹರ್
ಇನಿತು ಮನುವಂಶಜರ್ ? ನೋಡಲೆಂದೆಂಬೆಯೇನ್ ?
ಆನೆಯಂಬಾರಿಗಳ ರಾಜಶ್ರೀಸಿರಿಯಿಲ್ಲ ;
ಇವನು ಸುಂದರನಲ್ಲ ; ಯುವಕನಂತೂ ಅಲ್ಲ ;
ಮುದುಕನಾಗಿಹನು ; ಹಲ್ಲುಗಳುದುರಿ ಬಾಯಿ ಬರಿ
ಬೋಡಾಗಿಹುದು. ಇವಗೆ ಚೆಂದುಟಿಯ ಚೆಲುವಿಲ್ಲ ;
ಕಮಲಾಕ್ಷನಿವನಲ್ಲ. ಮತ್ತೇಕೆ ? ಮೃದುಮಧುರ
ವಾಗ್ವಿಲಾಸಕೆ ಸೋತು ಎಂಬೆಯೇನ್ ? ಅದು ಸುಳ್ಳು !
ಇವನ ದನಿ ದೂರಕ್ಕೆ ಕೇಳಿಸದು ; ಮಾತಿನಲಿ
ರಸಿಕತೆಯ ಬೆಡಗು ಬಿಂಕಗಳಿಲ್ಲ ; ಓಜಸ್ಸು
ವಿನ್ಯಾಸ ವೈಖರಿಗಳಿನಿತಿಲ್ಲ ; ವಿಷಯವೋ
ಬೀದಿಗುಡಿಸುವ ಜಾಡಮಾಲಿಗಳ ಕುರಿತದ್ದು !
ಹಿಮಗಿರಿಯ ಭವ್ಯ ಸೌಂದರ್ಯವನ್, ಗಗನವನೆ
ಚುಂಬಿಪ ತುಷಾರಮಯ ಗಿರಿಶಿರ ತರಂಗಗಳ
ರಮಣೀಯ ಕಮನೀಯ ಭೀಷ್ಮ ಸಂಮ್ಮೋಹವನ್
ಕುರಿತಿವನು ನುಡಿವನಲ್ಲ. ಅಥವಾ ಸಾಗರದ

* ಹರಿಜನೋದ್ಧಾರಕಾರ್ಯಕ್ಕಾಗಿ ಗಾಂಧಿಜಿ ಮೈಸೂರಿಗೆ ಬಂದಾಗ ರಚಿಸಿದ್ದು.

ಸುಂದರ ಸುನೀಲ ಸಲಿಲದ ನೃತ್ಯ ಮಹಿಮೆಯನ್
ಮಾತಿನಲಿ ತೋರಲೆಳಸುವ ವಾಗ್ಮಿಯಿವನಲ್ಲ.
ಚೈತ್ರ ವೈಶಾಖಾದಿ ಮಾಸಗಳ, ಪುಷ್ಪಗಳ,
ಪಕ್ಷಿಗಳ, ತರುಲತಾ ಗುಲ್ಮಗಳ, ವರ್ಷಗಳ
ಕುರಿತು ಮಂಜುಳ ಶೈಲಿಯಲಿ ವರ್ಣಿಸುವ ಸರಸ
ಕಾವ್ಯರ್ಷಿಯಿವನಲ್ಲ. ಇವನು ಹೇಳುವ ವಿಷಯ,
ಇವನ ಮೇಣ್ ಇವನ ಮಾತಿನ ತೆರದಿ, ದಿನದಿನದ
ಸರಳ ಸಾಧಾರಣದ ಒಡಹೊಟ್ಟೆ ಪಾಡಿನದು !
ಆದರೂ ದರ್ಶನಕೆ ಮುತ್ತಿಹರು ಮಾನವರು,
ಜೇನುಹಲ್ಲೆಗೆ ಜೇನುಹುಳು ಕವಿಯುವಂದದಲಿ,
ಐಸಿರಿ ಪವಾಡ ವಾಗ್ಮಿತೆಗಳನು ಲೆಕ್ಕಿಸದೆ,
ಪ್ರೇಮ ಸತ್ಯಾಹಿಂಸೆ ಸಮತೆಗಳನಾಚರಿಸಿ,
ಬೋಧಿಸುವ ಸಾಧಿಸುವ, ಜನರನೆಚ್ಚರಗೊಳಿಪ
ಸರಳ ಜೀವನದ ದೇವತ್ವದಾರಾಧನೆಗೆ !
ವೈಚಿತ್ರ್ಯವನೆ ದೇವರೆಂದೆಂಬುವಾ ಕಾಲ
ಒಂದಿತ್ತು. ಮತ್ಸ್ಯಕೂರ್ಮಾದಿ ನರಸಿಂಹರನು
ಭಯ ಭಕ್ತಿಯಿಂ ಪೂಜಿಸುವ ಕಾಲವೊಂದಿತ್ತು.
ರಾಜದರ್ಪದಲಿ, ಅಧಿಕಾರದಲಿ, ಕ್ರೌರ್ಯದಲಿ,
ಶಕ್ತಿ ಬಲ ಯುಕ್ತಿ ಸಿರಿ ಮೇಣ್ ಅಹಂಕಾರದಲಿ
ದೇವತ್ವವನು ಕಾಣುವಾ ಕಾಲವೊಂದಿತ್ತು.
ಆ ಅನಾಗರಿಕ ಮಾನವ ದೇವಭಾವಗಳ್
ಇಂದು ದೂರಾಗುತಿವೆ. ಮಾನವನ ಅಭ್ಯುದಯ
ಶ್ರೇಯಸ್ಸುಗಳಿಗಾಗಿ ನೊಂದವರ್, ಬೆಂದವರ್,
ಮನುಜರಂತೆಯೆ ಬಾಳಿ ಹೋರಾಡಿ ಸಂದವರ್,
ರಾಜ್ಯ ಭೋಗ ತ್ಯಾಗದಮಲ ವೈರಾಗಿಗಳ್,
ಮನುಜ ತನುಜರ್ ಇಂದು, ಕ್ರಿಸ್ತ ಬುದ್ಧಾದಿಗಳೆ,
ಮಾನವರ ಪೂಜೆಗೌರವಗಳನು ಕೈಕೊಳ್ವ
ದೇವತೆಗಳಾಗುವಾ ಕಾಲವೈತಂದಿಹುದು.
ಋಜುದೃಷ್ಟಿ ದೊರೆಕೊಳಲ್ ಮೂರು ಯುಗಗಳ್ ಕಳೆದು
ಕಲಿಕಾಲ ಬೇಕಾಯ್ತು ! ಧನ್ಯ, ಕಲಿಯುಗ, ಧನ್ಯ !

## ನಿನ್ನಿಚ್ಛೆಯಪ್ಪನ್ನೆಗಂ

ನನ್ನಾಸೆ ನಿನ್ನಿಚ್ಛೆಯಪ್ಪನ್ನೆಗಂ
ಸಲ್ಲದಿರಲಿ ;
ನನ್ನ ಸಾಹಸ ನಿನ್ನದಪ್ಪನ್ನೆಗಂ
ಗೆಲ್ಲದಿರಲಿ.
ಗೆಲ್ ಅಹಂಕಾರವನೆ ಬಲಿವನ್ನೆಗಂ
ಸೋಲೆ ಬರಲಿ ;
ಸುಖ ನಿನ್ನ ಮರೆವಂತೆ ಮಾಳ್ಪನ್ನೆಗಂ
ದುಃಖವಿರಲಿ.
ನನ್ನಿಷ್ಟದಿಷ್ಟ ನೀನಪ್ಪನ್ನೆಗಂ
ಕಷ್ಟ ಬರಲಿ ;
ಲಾಭ ಗುರುಲಾಭ ನೀನಪ್ಪನ್ನೆಗಂ
ನಷ್ಟ ಬರಲಿ !



# ತೇನ ವಿನಾ

ತೇನ ವಿನಾ ತೇನ ವಿನಾ
ತೃಣಮಪಿ ನ ಚಲತಿ ತೇನ ವಿನಾ.
ಮಮತೆಯ ಬಿಡು, ಹೇ ಮೂಢಮನಾ,
ಮೂಢಮನಾ, ಹೇ ಮೂಢಮನಾ !

ರವಿಗಿಲ್ಲದ ಭಯ, ಶಶಿಗಿಲ್ಲದ ಭಯ ,
ತಾರಾನಿವಹಕೆ ಇರದ ಭಯ,
ನಿನಗೇತಕೆ ಬಿಡು, ಅಣು ! ಶ್ರದ್ಧೆಯನಿಡು ;
ನಿನ್ನನೆ ನೈವೇದ್ಯವ ನೀಡು !
ತೇನ ವಿನಾ . . . .

ಎಲ್ಲೆಲ್ಲಿಯು ಕಯ್, ಎಲ್ಲೆಲ್ಲಿಯು ಕಾಲ್
ಎಲ್ಲೆಲ್ಲಿಯು ಕಣ್ ತಾನಾದ
ಸತ್ ಚಿತ್ ಶಕ್ತಿಯ ಆನಂದವಿರಲ್
ಬಿಡು ಏತಕೆ ನಿನಗೆ ವಿಷಾದ !
ತೇನ ವಿನಾ . . .



# ಶತಮಾನ ಸಂಧ್ಯೆ

ಫಾಲ್ಗುಣರವಿ ಕುಂಕುಮ ಛವಿ
ದಂತುರ ಹರಿದಂತದಲಿ
ದಿಙ್ನಾರಿಯ ಶುಭವಾರಿಯ
ಸಂಸೇಚನೆಯಂದದಲಿ
ಶೋಭಿಸುತಿದೆ, ರಂಜಿಸುತಿದೆ,
ಮೋಹಿಸುತಿದೆ ಕಣ್ಮನವ!
ನಿರ್ಜರ ರಸ ನಿರ್ಝರದಲಿ
ಮೀಯಿಸುತಿದೆ ಕವಿ ತನುವ!

ಶ್ರಮಜೀವಿಗಳಾಶ್ರಮದಾ
ನವಭವನದ ಸೃಷ್ಟಿಯಲಿ
ಕಲ್ಲೊಡೆಯುತ ಮಣ್ಣಗೆಯುತ
ಇಹರವರಾ ದೃಷ್ಟಿಯಲಿ
ಹೊಂಧೂಳಿಯ ಮುಗಿಲಾಳಿಯ
ಫಾಲ್ಗುಣದೀ ಸುರಸಂಧ್ಯೆ
ಮರೆದರು ತಾಂ ಮರೆಯದವೊಲೆ,
ರಸಶಿಶುವಿಲ್ಲದ ವಂಧ್ಯೆ!

ನವ ವಿದ್ರುಮರಜ ರಕ್ತಿಮ
ಗಗನಾಂಬುಧಿ ಪಾರದಲಿ
ಕರವಿಲ್ಲದ ದಿನಕರ ತಾಂ
ಪಶ್ಚಿಮ ದಿಗ್ದ್ವಾರದಲಿ
ತ್ರೈಭುವನದ ದೇವಾಲಯ
ದೇವತೆಯೊಲು ರಾಜಿಸಿರೆ
ನಾಂ ಗೈಯುವ ಗುಡಿಯಾವುದು
ಹೊಯ್ ಕಯ್ ಮೇಣದಕೆ ದೊರೆ?

ಗತವಿಂದಿಗೆ ಶತಮಾನಂ
ನೀನುದಯಿಸಿ, ಗುರುದೇವ;

ಮತಿಹೀನತೆ ಮತಕಲಹಂ
ಗತಿಸವು ಮೌಢ್ಯದ ಭಾವ!
ಬಹುದೂರದ ಬಂಗಾಳದ
ಕಲ್ಕತ್ತದಿ ನೀಸಂದು
ಎಸಗಿದ ತಪಕಾಂ ಧ್ಯಾಸಿಪೆ
ಮೈಸೂರಲಿ ನಿಂತಿಂದು!

ನರ ಹೃದಯದ ಬಿಸಿ ರಕ್ತದ
ಬಾಯಾರಿಕೆ ಆರಿಲ್ಲ;
ದಾರಿದ್ರ್ಯದ ಕರುಳಿರಿಯುವ
ಧನದಸಿಮೊನೆ ಮಾಸಿಲ್ಲ;
ಪಲ್ಗಿರಿದಿದೆ ಕ್ರೋಧದ ಮುಖ,
ನಖವೆತ್ತಿದೆ ಕಾರ್ಪಣ್ಯ;
ನರಳುತ್ತಿದೆ ಲೋಕದ ಸುಖ,
ಹೆಡೆಯೆತ್ತಿದೆ ದೌರ್ಜನ್ಯ!

ಜನ ಕಂಡರೆ ಜನ ಹೆದರಿದೆ;
ಎಲ್ಲೆಲ್ಲಿಯು ಸಂದೇಹ!
ಶಾಂತಿಯ ಪರದೆಯ ಹಿಂಗಡೆ
ಕ್ರಾಂತಿಯ ರಣ ಸನ್ನಾಹ!
ನರ ನೀಚತೆ ಮಾರೀಚತೆ
ದೇಶಪ್ರೇಮದ ನೆವದಿ
ದಂಷ್ಟ್ರಾಶ್ರಿತ ರಾಷ್ಟ್ರಂಗಳ
ಅಸು ಹಿಂಡುತ್ತಿದೆ ಜವದಿ!

ಹೇಳೇನದೊ ಪಶ್ಚಿಮದೆಡೆ
ರಂಜಿಪ ರಕ್ತಜ್ವಾಲೆ?
ಉನ್ಮಾದದ ರಣಮೋದದ
ಮದ್ದಿನ ಗುಂಡಿನ ಲೀಲೆ!
ಮದಮತ್ತರ ಪಾಶ್ಚಾತ್ಯರ
ಎದೆಗೊಬ್ಬಿನ ನೆಣಸೊಕ್ಕು

ಹೊತ್ತುತ್ತಿಹುದದರಿಂದಲೆ
ಧಗಿಸಿದೆ ಪಶ್ಚಿಮ ದಿಕ್ಕು!

ಸಂಪತ್ತಿದೆ; ವಿದ್ವತ್ತಿದೆ;
ಕೈಸೇರಿದೆ ವಿಜ್ಞಾನ.
ವಿಷಯಾಗ್ನಿಗೆ ಸುಖದಾಸೆಯ
ಕಲ್ಲೆಣ್ಣೆಯ ಪಾನ!
ಭುಗಿಭುಗಿಲೆನೆ ಧಗಧಗಿಸಿದೆ
ರಣರೋಷದ ಕಂಗಿಚ್ಚು;
ಹಲ್ಮಸೆದಿದೆ, ಜಿಲ್ಲೆತ್ತಿದೆ,
ಸಂಗ್ರಹಗೈಯುವ ಹುಚ್ಚು!

ಕಾಲವ ದೇಶವನಳೆವರು;
ಆಕಾಶವ ತೂಗುವರು.
ಅತಿ ದೂರದ ನಕ್ಷತ್ರಕೆ
ಕ್ಷಣಮಾತ್ರದಿ ಸಾಗುವರು.
ಭುವಿಗರ್ಭಕೆ ರವಿಗರ್ಭಕೆ
ನೀಹಾರಿಕೆಗೂ ಹೊಕ್ಕು
ಸತ್ತ್ವದ ಕರುಳನೆ ಕಿತ್ತಿದೆ
ವಿಜ್ಞಾನದ ರಣಹದ್ದಿನ
ನೆತ್ತರು ಬಸಿಯುವ ಕೊಕ್ಕು!

ನೊಣಮೀಸೆಯ ಹುಳುಹೆಜ್ಜೆಯ
ಎಣಿಸುವ ಬಿಜ್ಜೆಯ ಬಲ್ಲ;
ತನ್ನಾತ್ಮವ ತಾನರಿಯುವ
ಸಾಧನೆಯೊಂದನು ಒಲ್ಲ!
ಅನ್ವೇಷಣೆ! ಅನ್ವೇಷಣೆ!
ಸುಖಿಸಲು ಪುರಸತ್ತಿಲ್ಲ!
ತಿಳಿದೂ ತಿಳಿದೂ ತಿಳಿದೂ
ಕಡೆಗೇನೂ ಗೊತ್ತಿಲ್ಲ.

ಇಹವಿಲ್ಲದೆ ಪರವಿಲ್ಲದೆ
ತೊತ್ತಾಗಿಹ ಶೋಚ್ಯರಿಗೆ,
ನಡತೆಗೆ ಸ್ಮೃತಿ, ಚಿಂತೆಗೆ ಶ್ರುತಿ
ದೇವರೆ ಗತಿ ಪ್ರಾಚ್ಯರಿಗೆ!
ನೀನುದಿಸಿದ ಈ ದೇಶವೊ
ಕ್ಷುದ್ರದ ಛಿದ್ರದ ಬೀಡು :
ದಿವ್ಯಾತ್ಮರ ಸಂದೇಶಕೆ
ಕಾಡೊಳು ಹಾಡಿದ ಪಾಡು!

ಕವಿ ಹೃದಯದ ಓ ವೀಣೆಯೆ,
ರೋದಿಪೆ ಏತಕ್ಕಿಂತು?
ಕೊರಗುತ್ತಿಹೆ, ಮರುಗುತ್ತಿಹೆ,
ನಿಡುಸುಯ್ಯುವೆ ಏಕಿಂತು!
ಗುರುದೇವನ ಶತಮಾನದ
ಉತ್ಸವಕಿದೆ ರಸಗಾನ?
ನಿಷ್ಫಲಮೇಂ ಶತವರ್ಷದ
ಗುರುದೇವನ ಶತಮಾನ?

ಸಹ್ಯಾದ್ರಿಯು ಮಲಯಾದ್ರಿಯು
ತುಹಿನಾದ್ರಿಯು, ವಿಂಧ್ಯ,
ಇರುವಂತೆಯೆ ಸಾರ್ಥಕಮೀ
ಶತಮಾನದ ಸಂಧ್ಯೆ.
ಗುರುದೇವನ ಚೈತನ್ಯಕೆ
ನನ್ನುದ್ಧಾರವೆ ಸಾಕ್ಷಿ!
ನನ್ನಂತೆಯೆ ನಿಮ್ಮೆಲ್ಲರ
ಆತ್ಮೋದ್ಧಾರವು ಸಾಕ್ಷಿ!

ಮನವೆಮ್ಮದು ವಿಸ್ತರಿಸಿದೆ;
ಎದೆಗಾಗಿದೆ ಔದಾರ್ಯ.
ಕೈಗೂಡಿದೆ ಶತಮತಗತ
ಧರ್ಮಸಮನ್ವಯ ಕಾರ್ಯ.

ಪರಮಾತ್ಮನ ಅಸ್ತಿತ್ವದಿ
  ರಸಪೂರ್ಣಾಸ್ತಿಕ ಬುದ್ಧಿ ;
ಇಂದ್ರಿಯ ಸಂಯಮ ವಿಷಯದಿ
  ಹೃಚ್ಛಕ್ತಿಯ ಪರಿಶುದ್ಧಿ !

ಯುಗಯುಗಯುಗದತಿ ಕಷ್ಟದಿ
  ಜಡವನು ಜಯಿಸಿತು ಜೀವ;
ಬಹುತಪದಿಂದಾ ಜೀವಕೆ
  ಬಂದುದು ಮಾನವ ಭಾವ.
ಯುಗ ಯುಗ ಬೇಕೀ ಮನುಜತೆ
  ಮಾನವತನವನೆ ಮೀರಿ
ದೇವತ್ವವ ಸಂಪಾದಿಸೆ
  ಸಂಯಮ ಸ್ವರ್ಗಕ್ಕೇರಿ !

ಇಳಿತಂದುದು ಈ ಭೂಮಿಗೆ
  ಅವತಾರದ ಮೇಲವತಾರ !
ಆದುದ್ಧಾರಕೆ ಸಾವಿರ
  ಮಡಿಯಿಹುದಾಗುವ ಉದ್ಧಾರ !
ಮೊದಲಿಲ್ಲದ ತುದಿಯಿಲ್ಲದ
  ಕಾಲದ ಬಾಳೊಳು ಶತಮಾನ
ಎಂಬುದು ಒರಿ ಕಣ್ಮಿಟುಕದು !
  ಆದರಿಂ ಸಲ್ಲದು ದುಮ್ಮಾನ !

ಯುಗಚಕ್ರವ ಮುನ್ನೂಂಕಲು
  ಇದೆ ಗುರುದೇವನ ಶಕ್ತಿ ;
ನಮಗಿಂದಿಗೆ ಬೇಕಾದುದು
  ಉದ್ಧಾರದ ಆಸಕ್ತಿ.
ಮತಿವಂತನೆ, ಓ ಮಾನವ,
  ಕಟಿಬಂಧನಗೈ, ನಿಲ್ಲು !
ಯುಗದೊಳ್ಪಿಗೆ ಜಗದೊಳ್ಪಿಗೆ
  ನಿನ್ನೊಳ್ಪನೆ ನೀಂ ಗೆಲ್ಲು !

ಅದೊ ನೋಡದೊ ಮುಳುಗುತ್ತಿದೆ
ಶತಮಾನದ ಸಂಧ್ಯೆ ;
ಅದರೊಡನೆಯೆ ಮುಳುಮುಳುಗಲಿ
ಎದೆಗೇಡಿನ ಹಂದೆ!
ಮತ್ತೆರಡನೆ ಶತಮಾನಂ
ನಾಳೆಯ ಹೊತ್ತಾರೆ
ಮೂಡುತ್ತಿದೆ, ಹೊಸಚೇತನ
ಎತ್ತೆತ್ತಲು ತೋರೆ!

ಬಾ ಬೇಗನೆ, ರವಿದೇವನೆ,
ನವಶತಮಾನದ ದೂತ!
ಹೊಸ ಬಾಳಿಗೆ ತಳಿರಾಗಿಸು,
ನವಯುಗ ಚೈತ್ರದ ಚೇತ!
ದನಿಗೈಯಲಿ ಜಗದೆದೆಯಲಿ
ಖಗಕುಲ ನವಸಂಗೀತ!
ಹೊರಹೊಮ್ಮಲಿ ಸಂಮುಘನದಿ
ಕವಿಗಾನದ ನವನೀತ!



# ಶ್ರೀ ಅರವಿಂದರಿಗೆ

ಪ್ರಾಚ್ಯ ಪಾಶ್ಚಾತ್ಯ ತತ್ತ್ವಜ್ಞಾನ ಖನಿಗಳಲಿ
ತೊಳತೊಳಲಿ ಹುಡುಕಿ ಬಹುವಜ್ರಗಳನಾಯ್ದು ನಾಂ
ಶ್ರೀಮಂತನಾಗಿರ್ದೊಡಂ, ಹೇ ಪೂರ್ಣಯೋಗೀಂದ್ರ,
ಕೊನೆಗೆ ನಿನ್ನೀ ಮೇರುಕೃತಿಯ* ದರ್ಶನ ಶಿರದ
ಮೇರುವುನ್ನತಮತಿಯ ಮಾನಸ ಸರೋವರದಿ
ಪೂರ್ಣತೃಪ್ತಿಯನೀಂಟಿ ಶಾಂತವಾದುದು ನನ್ನ
ಧೀತೃಷ್ಣೆ. ಬುದ್ಧಿ ತಣಿವನ್ನೆಗಂ ಸಿದ್ಧಿ ತಾಂ
ಸಂದಿಗ್ಧಮೈಸೆ? ಮತಿಯನುಮತಿಯೆ ಸಾಧನೆಗೆ
ಅಗ್ನಿಸೋಪಾನಂ: ಆ ಜ್ಞಾನದಿಂ ಮೇಲಲ್ತೆ, ಪೇಳ್,
ದಿವ್ಯ ವಿಜ್ಞಾನ!
ಹೃದಯಕೆ ತೃಪ್ತಿಯಂ ತಂದ
ಗುರುದೇವ ಪರಮಹಂಸನ ಸಮನ್ವಯ ದೃಷ್ಟಿ,
ಮರ್ತ್ಯತತ್ತ್ವದ ಮನೋಮಯದ ರೀತಿಯೊಳಿಂದು
ತಾನಾಯ್ತು ತಾರ್ಕಿಕ ಸಮರ್ಪಕಂ, ನಿನ್ನ ಈ
ಲೋಕಲೋಕಂಗಳಂ ಲೋಕಾಂತರಂಗಳಂ
ತನ್ನ ಮುಷ್ಟಿಯೊಳಾಂತ ಪೂರ್ಣದೃಷ್ಟಿಯ ಕೃತಿಯ
ದರ್ಶನದಿ: ಬುದ್ಧಿ ತಿಮಿರಂ ಮಾಣ್ದುದಿನ್ನೆಸಗೆ!
ಸಿದ್ಧಿಸೂರ್ಯೋದಯಕೆ ಚೈತ್ಯಾಕ್ಷಿ ಪಕ್ಷ್ಮಂಗಳಂ
ತೆರೆದು ಗರಿಗೆದರಿರುವ ನನ್ನಾತ್ಮಪಕ್ಷೀಂದ್ರನಂ
ದಿಕ್ಕು ಕೆಡದಂತೆ ಮಿಂಚುಂಪೆರೞ ದೀಪ್ತಿಯಿಂ
ನನ್ನೆಗೆಯ್ದಾಶೀರ್ವದಿಸು, ಓ ಗುರುವೆ, ಗುರುದೇವ
ಪರಮಹಂಸನ ಶಿವಾನಂದ ಚರಣಾಬ್ಜಕೆ!

* "The Life Divine".

# ಅಂತರತಮ ನೀ ಗುರು

ಅಂತರತಮ ನೀ ಗುರು,
        ಹೇ ಆತ್ಮತಮೋಹಾರಿ!
ಜಟಿಲ ಕುಟಿಲತಮ ಅಂತರಂಗ ಬಹು
        ಭಾವ ವಿಪಿನ ಸಂಚಾರಿ,
ಅಂತರತಮ ನೀ ಗುರು,
        ಹೇ ಆತ್ಮತಮೋಹಾರಿ!

ಜನುಮ ಜನುಮ ಶತಕೋಟಿ ಸಂಸ್ಕಾರ
        ಪರಮ ಚರಮ ಸಂಸ್ಕಾರಿ,
ಅಂತರತಮ ನೀ ಗುರು,
        ಹೇ ಆತ್ಮತಮೋಹಾರಿ!
ಪಾಪ ಪುಣ್ಯ ನಾನಾ ಲಲಿತ ರುದ್ರ ಲೀಲಾ
        ರೂಪ ಅರೂಪ ವಿಹಾರಿ,
ಅಂತರತಮ ನೀ ಗುರು,
        ಹೇ ಆತ್ಮತಮೋಹಾರಿ!



# ನಿನ್ನ ಪದ ಕಮಲದಲಿ

ನಿನ್ನ ಪದಕಮಲದಲಿ ಮನೆಮಾಡಿರುವ ನನಗೆ
ಆ ಸ್ಥಾನ ಈ ಸ್ಥಾನ ಎಲ್ಲವಾಸ್ಥಾನ!
ಅಲ್ಲಿಲ್ಲಿ ಎನಲೇನು? ನೀನೆ ಅಡಿಯಿಡುವಲ್ಲಿ
ದಿವ್ಯ ಪದವಿಗಳಲ್ತೆ ಮಾನಾವಮಾನ?

ಬೆಟ್ಟಗಳನೇರುವೆಯೊ? ಕಣಿವೆಗಳನಿಳಿಯುವೆಯೊ?
ಕೆಸರುಸುಬುಗಳೊಳಾಡಿ ವಿಹರಿಪೆಯೊ ನೀನು?
ಇಲ್ಲಿ ಸಂಚರಿಸಲ್ಲಿ ಚರಿಸದಿರೆನಲು ನನಗೆ
ನಿನ್ನ ಲೀಲೆಗೆ ಗೆರೆಯನೆಳೆವ ಹಕ್ಕೇನು?

ಎಲ್ಲಿ ನೀ ಪದವಿಡುವೆ ಅಲ್ಲೆ ಉತ್ತಮ ಪದವಿ;
ನಿನ್ನ ಪದವಲ್ಲದಾ ಪದವಿಯೂ ಹೀನ.
ನಿನ್ನಡಿಯ ಪುಡಿಯ ಬಡತನವೆ ಕಡವರ ಕಣಾ:
ನಿನ್ನಡಿಗೆ ದೂರವಿರೆ ಧನಿಕನೂ ದೀನ?



# ಹಾರೈಸು

ಹಾರೈಸು ಹಾರೈಸು ಹಾರೈಸು, ಜೀವ:
ಹಾರೈಸು ನೀನಾಗುವನ್ನೆಗಂ ದೇವ!

ಹಾರೈಸಿ ಹಾರೈಸಿ ಹಾರೈಸಿ
   ಅನ್ನ ತಾನಾದುದೈ ಪ್ರಾಣ;
ಹಾರೈಸಿ ಹಾರೈಸಿ ಹಾರೈಸಿ
   ಹಾರಿದುದೊ ನೀರಧಿಯ ಮಿನ!
ಹಾರೈಸಿ ಹಾರೈಸಿ ಹಾರೈಸಿ
   ಪ್ರಾಣೆಗುದಿಸಿತು ಮನೋಜ್ಞಾನ;
ಹಾರೈಸಿ ಹಾರೈಸಿ ಹಾರೈಸಿ
   ಸಿದ್ಧಿಯಾಯ್ತಾತ್ಮವಿಜ್ಞಾನ!—

ಹಾರೈಸಿ ಹಾರೈಸಿ ಹಾರೈಸಿ
   ಹಸುರಸುರುರ್ದುವೊ ಕಲ್ಲುಮಣ್ಣು;
ಹಾರೈಸಿ ಹಾರೈಸಿ ಹಾರೈಸಿ
   ಕುರುಡುಜಡಕುದಿಸಿತಯ್ ಕಣ್ಣು!
ಹಾರೈಸಿ ಹಾರೈಸಿ ಹಾರೈಸಿ
   ಚಿತ್ ಉರುಳ್ದುದು ಸುತ್ತಿಸುರುಳಿ;
ಹಾರೈಸಿ ಹಾರೈಸಿ ಹಾರೈಸಿ
   ಮೃತ್ ಅರಳ್ವುದೊ ಅತ್ತೆ ಮರಳಿ!



# ಶ್ರೀಗುರು ಚರಣಕೆ

ತುಳಿ! ತುಳಿ! ಹತ್ತಿ ತುಳಿ!
ಮತ್ತೆ ತುಳಿ, ಒತ್ತಿ ತುಳಿ,
   ಅಹಂಕಾರವಳಿಯಲಿ!
ನಾನು ಎಂಬುದೆಲ್ಲ ಉದುರಿ
   ನೀನು ಮಾತ್ರ ಉಳಿಯಲಿ!

ಹೆಡೆಹೆಡೆಗಳಸೆಡೆಬಿಡದೆಯೆ
ಕಾಳೀಯನ ತುಳಿದಂದದಿ
   ಗೋವಿಂದನ ಚರಣ
ತನ್ನ ನಿತೂ ವಿಷ ವಮನದಿ
   ನನ್ನಂತಃಕರಣ
ಮಮತಾಫಣಿ ಲಯಹೊಂದುತೆ
   ಬರಲಮೃತದ ಮರಣ!

ತುಳೀ ಹತ್ತಿ! ತುಳೀ ಒತ್ತಿ!
   ಅಹಂಕಾರವಳಿಯಲಿ!
ನನ್ನ 'ಸತ್ತ್ವದೆಲ್ಲ ಸತ್ತು
   ನಿನ್ನ ಸೊತ್ತು ಉಳಿಯಲಿ!



# ಆಕ್ರಮಿಸು

ಆಕ್ರಮಿಸು ಬಂದೆನ್ನ ಅಲ್ಪತ್ವಮಂ,
ಓ ಅಸಂತ,
ಬಾಳರಳಿ ಬರ್ದುಕುರುಳಿ ಸಿದ್ಧಿಸುವವೋಲ್
ನಿರ್ದಿಗಂತ !
ಏಳು ಕಡಲುಗಳೆದ್ದು ಗಿರಿಶಿಖರವೇಳನೂ
ಅವ್ವಳಿಸುವೋಲ್,
ಏಳು ಶಿಖರಗಳೆರಗಿ ಕಡಲೇಳರಾಳವೂ
ತಳಮಳಿಸುವೋಲ್ ;
ಆಕ್ರಮಿಸು ಬಂದೆನ್ನ ಅಲ್ಪತ್ವಮಂ,
ಓ ಅನಂತ.—

ಪಾತಾಳದಿಂದಂಬರಕೆ ಹೆಡೆಯೆತ್ತುವೋಲ್
ಅಗ್ನಿಶೇಷ,
ಕೋಟಿವಿದ್ಯುಜ್ಜಿಹ್ವೆಗಳ್ ತಿವಿಯೆ ತವಿವಂತೆವೋಲ್
ತಿಮಿರದೋಷ,
ಪಾವೊಡವೆ, ಬೆಂಕೆಗಣ್, ಗಂಗೆಮುಡಿ, ಓ ಬಾರ,
ವ್ಯೋಮಕೇಶ !—
ಆಕ್ರಮಿಸು ಬಂದೆನ್ನ ಅಲ್ಪತ್ವಮಂ
ಓ ಅನಂತ.



## ಮುಚ್ಚುಮರೆಯಿಲ್ಲದೆಯೆ

ಮುಚ್ಚುಮರೆಯಿಲ್ಲದೆಯೆ ನಿನ್ನ ಮುಂದೆಲ್ಲವನು
ಬಿಚ್ಚಿಡುವೆ, ಓ ಗುರುವೆ, ಅಂತರಾತ್ಮಾ :
ನಾಕವಿದೆ, ನರಕವಿದೆ; ಪಾಪವಿದೆ, ಪುಣ್ಯವಿದೆ;
ಸ್ವೀಕರಿಸು, ಓ ಗುರುವೆ, ಅಂತರಾತ್ಮಾ !

ರವಿಗೆ ಕಾಂತಿಯನೀವ ನಿನ್ನ ಕಣ್ಣೀಕ್ಷಿಸಲು
ಪಾಪ ತಾನುಳಿಯುವುದೆ ಪಾಪವಾಗಿ ?
ಗಂಗೆ ತಾನುದ್ಭವಿಪ ನಿನ್ನಡಿಯ ಸೋಂಕಿಂಗೆ
ನರಕ ತಾನುಳಿಯುವುದೆ ನರಕವಾಗಿ ?

ಸಾಂತ ರೀತಿಯ ನೆಮ್ಮಿ ಕದಡಿರುವುದೆನ್ನಾತ್ಮ ;
ನಾಂತ ರೀತಿಯದೆಂತೊ, ಓ ಅನಂತಾ ?
ನನ್ನ ನೀತಿಯ ಕುರುಡಿನಿಂದೆನ್ನ ರಕ್ಷಿಸಯ್ ;
ನಿನ್ನ ನೀತಿಯ ಬೆಳಕಿನಾನಂದಕೊಯ್ !



# ಜನ್ಮೋತ್ಸವ

ಇಲ್ಲಿ ಬಾ ಸಂಭವಿಸು ಇಂದೆನ್ನ ಹೃದಯದಲಿ,
ನಿತ್ಯವೂ ಅವತರಿಪ ಸತ್ಯಾವತಾರ!
ಮಣ್ಣಾಗಿ ಮರವಾಗಿ ಮಿಗವಾಗಿ ಖಗವಾಗಿ
ಭವಭವದಿ ಭವಿಸಿ, ಓ ಭವವಿದೂರ,
ಮಣ್ತನಕೆ ಮರತನಕೆ ಮಿಗತನಕೆ ಖಗತನಕೆ
ಮುನ್ನಡೆಗೆ ಕಣ್ಣಾದ ಗುರುವೆ, ಬಾರ!
ಮೂಡಿ ಬಂದಿಂದೆನ್ನ ನರರೂಪ ಚೇತನದಿ
ನಾರಾಯಣತ್ವಕ್ಕೆ ದಾರಿ ತೋರ!
ಅಂದು ಅರಮನೆಯಲ್ಲಿ, ಮತ್ತೆ ಸೆರೆಮನೆಯಲ್ಲಿ,
ಅಲ್ಲಿ ತುರುಪಟ್ಟಿಯಲಿ, ಇಲ್ಲಿ ಕಿರುಗುಡಿಸಲಲಿ,
ದೇಶದೇಶದಿ ವೇಷವೇಷಾಂತರವನಾಂತು
ವಿಶ್ವ ಸಾರಥಿಯಾಗಿ ಲೀಲಾರಥವನೆಂತು
ಚೋದಿಸಿರುವೆಯೊ ಅಂತೆ, ಸೃಷ್ಟಿಲೋಲ,
ಅವತರಿಸು ಬಾ ಇಲ್ಲಿ ಇಂದೆನ್ನ ಚೈತ್ಯದಲಿ,
ಹೇ ದಿವ್ಯ ಸಚ್ಚಿದಾನಂದ ಶೀಲ!

# ಋತಚಿನ್ಮಯೀ ಜಗನ್ಮಾತೆಗೆ

ಓಂ! ಸಚ್ಚಿದಾನಂದ ತ್ರಿತ್ವಮುಖವಾದ ಪರಬ್ರಹ್ಮದಲ್ಲಿ
ಅಭವದೊತ್ತಾದೆ, ಭವದ ಬಿತ್ತಾದೆ, ಋತದ ಚಿತ್ತಾದೆ ನೀ;
ಇಳಿದು ಬಾ ಇಳೆಗೆ, ತುಂಬಿ ತಾ ಬೇಗೆ ಜೀವಕೇಂದ್ರದಲ್ಲಿ.
ಮತ್ತೆ ಮೂಡಿ ಬಾ ಬಿತ್ತಿ ನೀನೆನ್ನ ಚಿತ್ತ ಪೃಥಿವಿಯಲ್ಲಿ.

ಋತದ ಚಿತ್ತಾಗಿ ವಿಶ್ವಗಳ ಸೃಜಿಸಿ ನಡಸುತಿಹ ಶಕ್ತಿಯೆ,
ಅನ್ನ ಪ್ರಾಣಗಳ ಮನೋಲೋಕಗಳ ಸೂತ್ರಧರ ಯುಕ್ತಿಯೆ,
ಅಖಿಲ ಬಂಧನದ ಹೃದಯದಲ್ಲಿ ಅವಿನಾಶಿ ಆಸಕ್ತಿಯೆ,
ನಿನ್ನ ಅವತಾರವೆನ್ನ ಉದ್ಧಾರ; ಬಾ, ದಿವ್ಯ ಮುಕ್ತಿಯೆ.

ಅವಿಭಕ್ತವಾಗಿ ಸುವಿಭಕ್ತದಂತೆ ತೋರುತಿರುವ ಮಾಯೆ,
ಪ್ರಕೃತಿ ಪುರುಷರಿಗೆ ನಿತ್ಯಜನ್ಮವನು ನೀಡುತಿರುವ ತಾಯೆ,
ಕಾಲದೇಶ ಆಕಾಶಕೋಶಗಳನೂದುತಿರುವ ಛಾಯೆ,
ಅಮೃತದಲ್ಲಿ ಋತವಾಗಿ ಸಂಭವಿಸು ಸಾವು ನೋವು ಸಾಯೆ.

ಎಲ್ಲವನು ಮಾಡಿ ಎಲ್ಲರೊಳಗೂಡಿ ನೀನೆಯೆಲ್ಲವಾದೆ.
ಜ್ಯೋತಿಯಾದರೂ ತಮೋಲೀಲೆಯಲಿ ಜಡದ ಮುದ್ರೆಯಾದೆ.
ಎನಿತು ಕರೆದರೂ ಓಕೊಳ್ಳದಿರುವ ಅಚಿನ್ನಿದ್ರೆಯಾದೆ;
ಬೆಳಗಿ ನನ್ನಾತ್ಮಕಿಳಿದು ಬಾ, ತಾಯಿ, ನೀನೆ ಬ್ರಹ್ಮಬೋಧೆ.

ಮರೆವು ನೀನೆ ಮೇಣರಿವು ನೀನೆ ಮೇಣ್ ಗುರುವು ನೀನೆ, ದೇವಿ.
ರೋಗಶಕ್ತಿ ನೀನೌಷಧಿಯ ಶಕ್ತಿ; ಕೊಲುವೆ ಕಾವೆಯೋವಿ.
ಮಾವಿನಲ್ಲಿ ಸಿಹಿ, ಬೇವಿನಲ್ಲಿ ಕಹಿ; ನಿನ್ನ ಇಚ್ಛೆಯಂತೆ
ಗಾಳಿ ಸೇರಿ ನೀರಾಗಿ ತೋರಲೀ ಪ್ರಕೃತಿ ನಿಯಮವಂತೆ!

ಹುಲ್ಲು ಬೆಳೆವಲ್ಲಿ, ನೆಲ್ಲು ಮೊಳೆವಲ್ಲಿ, ಕಾಯಿ ಪಣ್ಣುವಲ್ಲಿ,
ಗೂಡುಕಟ್ಟಿ ತಾಯ್ ಮೊಟ್ಟೆಯಿಟ್ಟು ಮರಿಮಾಡಿ ಸಲಹುವಲ್ಲಿ,
ಮಮತೆಯಂತೆ ಮೇಣ್ ಕಾಮದಂತೆ ಮೇಣ್ ಪ್ರೇಮಭಾವದಲ್ಲಿ
ನಿನ್ನ ಚಿಚ್ಛಕ್ತಿ ತನ್ನ ನಿತ್ಯನದ್ ರಸವ ಸವಿವುದಿಲ್ಲಿ!

ಏಳು ಲೋಕಗಳನಿಳಿದು ದುಮುಕಿ ಜಡವಾಗಿ ಕಡೆಗೆ ನಿಂದೆ;
ಜಡದ ನಡುವೆ ಜೀವವನು ಕಡೆದೆ ಚಿತ್ರಪಶ್ಯಕ್ತಿಯಿಂದೆ;
ಜೀವದಿಂದೆ ಮನಸಾಗುತರಳಿ ಪರಿಣಾಮ ಪಡೆದು ಬಂದೆ;
ಮನವ ಮಾರ್ದ್ದ ವಿಜ್ಞಾನವನು ತೋರೆ ತೇರನೇರು ಇಂದೆ.

ಗಾಳಿಗುಸಿರು ನೀ ಬೆಂಕೆಗುರಿಯು ನೀನುದಕಕದರ ಜೀವ:
ಅಗ್ನಿ ಇಂದ್ರ ವರುಣಾರ್ಕ ದೇವರನು ಮಾಡಿ ನೋಡಿ ಕಾವ
ಶಿವನ ಶಕ್ತಿ ನೀ, ವಿಷ್ಣು ಲಕ್ಷ್ಮಿ ನೀ, ಚತುರ್ಮುಖನ ರಾಣಿ;
ದಿವ್ಯವಿಜ್ಞಾನ ನನ್ನೊಳುದ್ಭವಿಸೆ ಮತಿಗಾಗಮಿಸು, ವಾಣಿ!

ಮೃತ್ಯುರೂಪಿ ನೀನಮೃತರೂಪಿ ನೀನಖಿಲ ಜನ್ಮದಾತೆ,
ಪರಾಪ್ರಕೃತಿ ನೀ ನಿನ್ನ ಮಾಯೆಯಲಿ ಸಕಲ ಜೀವಭೂತೆ.
ನಿನ್ನ ಕೃಪೆಯಿಲ್ಲದಿದ್ದರೆಮಗೆಲ್ಲಿ ಮುಕ್ತಿ, ಜಗನ್ನಾಥೆ?
ನಿನ್ನ ಋತಚಿತ್ತನೆಮಗೆ ಕೃಪೆಯಿತ್ತು ಕಾಯಿ, ದಿವ್ಯಮಾತೆ.

ಹೃದಯಪದ್ಮ ತಾಸರಳೆ ಕರೆವೆ ಬಾರಮ್ಮ ಬಾ, ಇಳಿದು ಬಾ!
ಮನೋದ್ವಾರ ತಾ ಬಿರಿಯೆ ಕರೆವೆ, ಜಗದಂಬೆ, ಬಾ ಇಳಿದು ಬಾ!
ಅಗ್ನಿಹಂಸ ಗರಿಗೆದರೆ ಕರೆವೆ, ಬಾ ತಾಯಿ, ಬಾ, ಇಳಿದು ಬಾ!
ಚೈತ್ಯಪುರುಷ ಯಜ್ಞಕ್ಕೆ ನೀನೆ ಅಧ್ವರ್ಯು, ಬಾ, ಇಳಿದು ಬಾ!

ಓಂ ಶಾಂತಿ: ಶಾಂತಿ: ಶಾಂತಿ:



# ಮೊದಲ ಪಂಕ್ತಿಗಳ ಅಕಾರಾದಿ